ಶ್ರೀಃ

# ಅಭಿಷೇಕ ಸೂಕ್ತಗಳು

## ಕನ್ನಡ ಅನುವಾದ ಸಹಿತ

ಅನುವಾದಕರು:

ಪ್ರೊ. ಎಸ್. ವೆಂಕಟೇಶ ಮೂರ್ತಿ

ಪ್ರಕಾಶಕರು:

ಪವನಜ ಪ್ರಕಾಶನ,

ನಂ. ೧೬೨೫, ೫ ನೇ ಬಿ ಕ್ರಾಸ್, ೧೭ ನೇ ಮುಖ್ಯ ರಸ್ತೆ,

೨ ನೇ ಬ್ಲಾಕ್, ಬನಶಂಕರಿ ೧ ನೇ ಹಂತ,

ಬೆಂಗಳೂರು ೫೬೦೦೫೦

॥ ಶ್ರೀ ಗುರುಭ್ಯೋ ನಮಃ ॥ ಹರಿಃ ಓಂ ॥

# ಪೀಠಿಕೆ

ಅಭಿಷೇಕಸೂಕ್ತಗಳು ಎಂಬ ಈ ಚಿಕ್ಕ ಗ್ರಂಥದಲ್ಲಿ ವೈಷ್ಣವರು ದಿನನಿತ್ಯ ದೇವರ ಅಭಿಷೇಕದ ಸಮಯದಲ್ಲಿ ಹಾಗೂ ದೇವರ ಪೂಜೆ ಮಾಡುವಾಗ ಹೇಳಲೇ ಬೇಕಾದ ಮುಖ್ಯವಾದ ಸೂಕ್ತಗಳು ಹಾಗೂ ಮಂತ್ರಗಳನ್ನು ಸುಲಭವಾದ ಅರ್ಥ ವಿವರಣೆ ಸಹಿತ ಕೊಡಲು ಪ್ರಯತ್ನಿಸಿದ್ದೇನೆ. ಹಲವಾರು ಪ್ರಕಟಿತ ಗ್ರಂಥಗಳ ಆಧಾರದ ಮೇಲೆ ಆದಷ್ಟು ಶುದ್ಧವಾದ ಪಾಠವನ್ನು ನೀಡಿದ್ದೇನೆ. ಸೂಕ್ತಗಳನ್ನು ಸ್ವರಸಹಿತ ಮುದ್ರಿಸಲು ಸಾಧ್ಯವಾಗಿಲ್ಲ. ಪಾರಾಯಣ ಮಾಡುವ ಮುಂಚೆ ಯೋಗ್ಯ ಗುರುಗಳಿಂದ ಸ್ವರಸಹಿತಪಾಠವನ್ನು ಹೇಳಿಸಿಕೊಳ್ಳುವುದು ಶ್ರೇಯಸ್ಕರ. ಈ ಹೊತ್ತಿಗೆಯಲ್ಲಿ ಪುರುಷಸೂಕ್ತ, ಶ್ರೀಸೂಕ್ತ, ಅಂಭೃಣಿ ಸೂಕ್ತ, ವಿಷ್ಣುಸೂಕ್ತ, ಮನ್ಯುಸೂಕ್ತ, ಬಳಿತ್ಥಾಸೂಕ್ತ, ಋಷಭಸೂಕ್ತ, ಪಂಚಾಮೃತ ಸೂಕ್ತಗಳು, ಗರುಡ ಹಾಗೂ ಶೇಷದೇವರ ಮಂತ್ರಗಳನ್ನು ಪ್ರಸ್ತುತಪಡಿಸಲಾಗಿದೆ. ಈ ಸೂಕ್ತಗಳ ಬಗ್ಗೆ ಋಷಿ, ಛಂದಸ್ಸು, ದೇವತೆ ಮೊದಲಾದ ಅವಶ್ಯವಾದ ಮಾಹಿತಿಗಳನ್ನು ಈ ಮುಂದೆ ಕೊಡಲಾಗಿದೆ. ಇವುಗಳನ್ನು ತಿಳಿಯದೆ ಪಾರಾಯಣ ಮಾಡುವುದು ನಿಷ್ಫಲವಲ್ಲದೆ ಅನರ್ಥಕ್ಕೂ ಕಾರಣ ಎಂಬುದಾಗಿ ತಿಳಿದವರು ಹೇಳುತ್ತಾರೆ. ಆದ್ದರಿಂದ ಈ ಮುಂದೆ ಹೇಳಿರುವ ಪ್ರಕಾರ ಸೂಕ್ತಗಳ ಬಗ್ಗೆ ಸ್ವಲ್ಪ ಅರಿವನ್ನು ಪಡೆದು ಕೊಂಡು ಸೂಕ್ತ ಪಠನೆ ಮಾಡುವುದು ಉತ್ತಮ.

**ಪುರುಷಸೂಕ್ತ:** ಇದು ಋಗ್ವೇದ ಹತ್ತನೇ ಮಂಡಲದ ತೊಂಬತ್ತನೇ ಸೂಕ್ತ. ಕೃಷ್ಣಯಜುರ್ವೇದದ ತೈತ್ತಿರೀಯಾರಣ್ಯಕದಲ್ಲಿ ಮೂರನೆಯ ಚಿತ್ತಿಪ್ರಶ್ನೆಯಲ್ಲಿ ಹನ್ನೊಂದನೆಯ ಅನುವಾಕವಾಗಿಯೂ ಪಠಿತವಾಗಿದೆ. ಋಗ್ವೇದ ಪಾಠದಲ್ಲಿ ಹದಿನಾರು ಮಂತ್ರವಾದರೆ ತೈತ್ತಿರೀಯ ಪಾಠದಲ್ಲಿ ಹದಿನೆಂಟು ಮಂತ್ರಗಳಿವೆ. ಋಗ್ವೇದ ಪಾಠದ ಹದಿನೈದನೆಯ ಮಂತ್ರವು ಯಜುರ್ವೇದ ಪಾಠದಲ್ಲಿ ಏಳನೆಯ ಮಂತ್ರವಾಗಿ ಪಠಿತವಾಗಿದೆ. ಋಗ್ವೇದದಲ್ಲಿ ಕಡೆಯ ಒಂದು ಋಕ್ಕು ಮಾತ್ರ ತ್ರಿಷ್ಟುಪ್ ಛಂದಸ್ಸಿನಲ್ಲಿದ್ದರೆ, ತೈತ್ತಿರೀಯ ಪಾಠದಲ್ಲಿ ಕಡೆಯ ಮೂರು ಮಂತ್ರಗಳು ತ್ರಿಷ್ಟುಪ್ ಛಂದಸ್ಸಿನಲ್ಲಿವೆ. ಎರಡೂ ಪಾಠಗಳಲ್ಲಿ ಮೊದಲ ಹದಿನೈದು ಮಂತ್ರಗಳು

ಅನುಷ್ಟುಪ್ ಛಂದಸ್ಸಿನಲ್ಲಿವೆ.

ಪುರುಷಸೂಕ್ತವು ಸರ್ವವೇದಾರ್ಥ ಪ್ರತಿಪಾದಕವಾದ ಕಾರಣ ಈ ಸೂಕ್ತದ ಪಾರಾಯಣದಿಂದ ಸಕಲ ವೇದಗಳ ಪಾರಾಯಣ ಮಾಡಿದ ಪುಣ್ಯ ಪ್ರಾಪ್ತವಾಗುತ್ತದೆ. ಆದ್ದರಿಂದಲೇ ಎಲ್ಲರೂ ಬ್ರಹ್ಮಯಜ್ಞ ಕಾಲದಲ್ಲಿ ಮಾಡುವ ವೇದಾಧ್ಯಯನದ ಸಮಯದಲ್ಲಿ ಪುರುಷಸೂಕ್ತವನ್ನು ಪಾರಾಯಣ ಮಾಡುತ್ತಾರೆ. ಪುರುಷಸೂಕ್ತದ ಅರ್ಥವನ್ನು ಮನನ ಮಾಡಿಕೊಂಡು ಪಾರಾಯಣ ಮಾಡಿದರೆ ಮಾತ್ರ ಪೂರ್ಣ ಫಲ ದೊರಕುವುದು. ಅರ್ಥ ತಿಳಿಯದೆ ಸೂಕ್ತ ಪಾರಾಯಣ ಮಾಡುವುದು ನಿಷ್ಫಲ. ಸಮಸ್ತ ವೇದಗಳೂ ವಿಷ್ಣುವನ್ನೇ ಹೇಳುತ್ತವೆ ಎಂಬುದು ಪ್ರಮಾಣ ಸಿದ್ಧವಾದ ವಿಷಯ. ಪುರುಷಸೂಕ್ತವು ಸಕಲ ವೇದಗಳ ಪ್ರತಿಪಾದಕ. ಆದುದರಿಂದ ವಿಷ್ಣುವನ್ನೇ ಹೇಳುತ್ತದೆ. ಪುರುಷಸೂಕ್ತದಲ್ಲಿ ಬರುವ ಪುರುಷ ಎಂಬ ಶಬ್ದವು ಸರ್ವೋತ್ತಮ ವಿಷ್ಣುವನ್ನೇ ಪ್ರತಿಪಾದಿಸುತ್ತದೆ ಎಂಬುದಾಗಿ ಎಲ್ಲ ವ್ಯಾಖ್ಯಾನಕಾರರೂ ಸ್ಪಷ್ಟವಾಗಿ ಪ್ರಮಾಣ ಸಹಿತ ನಿರ್ಣಯಿಸಿದ್ದಾರೆ. ಪುರುಷ ಸೂಕ್ತವನ್ನು ಮುಖ್ಯವಾಗಿ ದೇವರ ಅಭಿಷೇಕದ ಸಮಯದಲ್ಲಿ ಪಠಿಸುವ ಸಂಪ್ರದಾಯವಿದೆ. ಪುರುಷ ಸೂಕ್ತದ ಪಠನವಿಲ್ಲದೆ ದೇವರ ಪೂಜೆಯೇ ಇಲ್ಲ. ತಂತ್ರಸಾರ ಮತ್ತು ಆಗಮೋಕ್ತ ವಿಧಾನವಲ್ಲದೆ ಕೇವಲ ಪುರುಷಸೂಕ್ತದಿಂದಲೂ ದೇವರ ಪೂಜೆ ಮಾಡುವುದು ಪ್ರಮಾಣಸಿದ್ಧವೇ ಆಗಿದೆ. ಒಂದೊಂದು ಋಕ್ಕಿನಿಂದ ಒಂದೊಂದರಂತೆ ದೇವರಿಗೆ ಷೋಡಶೋಪಚಾರ ಪೂಜೆ ಸಲ್ಲಿಸುವ ಸಂಪ್ರದಾಯವಿದೆ.

ಪುರುಷಸೂಕ್ತಕ್ಕೆ ಅಂತರ್ಯಾಮಿ ನಾರಾಯಣನೇ ಋಷಿಯು. ಮೊದಲ ಹದಿನೈದು ಋಕ್ಕುಗಳಿಗೆ ಅನುಷ್ಟುಪ್ ಛಂದಸ್ಸು. ಕೊನೆಯದು ತ್ರಿಷ್ಟುಪ್ ಛಂದಸ್ಸು. ಪುರುಷರೂಪಿಯಾದ ನಾರಾಯಣನೇ ದೇವತೆ.

**ಶ್ರೀಸೂಕ್ತ:** ಇದು ಮಹಾಲಕ್ಷ್ಮಿಯ ಉಪಾಸನೆಗಾಗಿರುವ ಸೂಕ್ತ. ಇದರಲ್ಲಿ ಲಕ್ಷ್ಮಿಯ ಮಹಿಮೆಯನ್ನು ಸ್ತುತಿಸುವುದರ ಮೂಲಕ ಅವಳಿಗೂ ನಿಯಾಮಕನಾದ ಸ್ವತಂತ್ರನೂ ಸರ್ವೋತ್ತಮನೂ ಆದ ಶ್ರೀಮನ್ ನಾರಾಯಣನ ಮಹಿಮೆಯನ್ನು ಪ್ರತಿಪಾದಿಸುವುದು. ಹಿರಣ್ಯವರ್ಣಾಂ ಎಂದು ಪ್ರಾರಂಭವಾಗುವ ಹದಿನೈದು ಋಚೆಗಳ ಶ್ರೀಸೂಕ್ತಕ್ಕೆ ಆನಂದ

ಕರ್ದವ ಚಿಕ್ಲೀತ ಮುಂತಾದವರು ಋಷಿಗಳು. ಶ್ರೀಮಹಾಲಕ್ಷ್ಮಿಯೇ ದೇವತೆ. ಮೊದಲ ಮೂರು ಮಂತ್ರಗಳು ಅನುಷ್ಟುಪ್, ನಾಲ್ಕನೆಯದು ಬೃಹತೀ, ಐದು ಮತ್ತು ಆರನೆಯವು ತ್ರಿಷ್ಟುಪ್, ಅನಂತರದ ಎಂಟು ಮಂತ್ರಗಳು ಅನುಷ್ಟುಪ್ ಛಂದಸ್ಸು ಹಾಗೂ ಕೊನೆಯದು ಪ್ರಸ್ತಾರ ಪಂಕ್ತಿ ಎಂದು ತಿಳಿಯಬೇಕು. ಈ ಸೂಕ್ತವನ್ನು ಪ್ರತಿನಿತ್ಯವೂ ದೇವರ ಪೂಜೆಯ ಕಾಲಕ್ಕೆ ಶಂಖಕ್ಕೆ ಅಭಿಷೇಕ ಮಾಡುವಾಗ ಪಠಿಸಬೇಕು. ಸ್ತ್ರೀಯರು ಶ್ರೀಸೂಕ್ತದಿಂದ ಮಹಾಲಕ್ಷ್ಮಿಗೆ ಷೋಡಶೋಪಚಾರ ಪೂಜೆಯನ್ನು ಮಾಡುವ ಸಂಪ್ರದಾಯವಿದೆ.

**ಅಂಭ್ರಣೀಸೂಕ್ತ:** ಋಗ್ವೇದದಲ್ಲಿ ಬರುವ ಅಂಭ್ರಣೀ ಸೂಕ್ತವು ವೇದಾಭಿಮಾನಿನಿಯಾದ ಮಹಾಲಕ್ಷ್ಮಿಯನ್ನು ಸ್ತುತಿಸುವ ಸೂಕ್ತ. 'ಅಹಂ ರುದ್ರೇಭಿಃ' ಎಂದು ಪ್ರಾರಂಭವಾಗುವ ಎಂಟು ಮಂತ್ರಗಳಿಂದ ಕೂಡಿರುವ ಈ ಸೂಕ್ತಕ್ಕೆ 'ವಾಗ್ ಅಂಭ್ರಣಿ' ಎಂದು ಕರೆಯಲ್ಪಡುವ ಮಹಾಲಕ್ಷ್ಮಿಯೇ ಋಷಿ. ದೇವತೆಯೂ ಅಂಭ್ರಣಿಯೇ. ಎರಡನೆಯ ಮಂತ್ರದ ಛಂದಸ್ಸು ಜಗತೀ, ಉಳಿದವು ತ್ರಿಷ್ಟುಪ್ ಛಂದಸ್ಸು. ದೇವರ ನಿರ್ಮಾಲ್ಯ ವಿಸರ್ಜನೆಯ ಕಾಲದಲ್ಲಿ ಈ ಸೂಕ್ತವನ್ನು ಪಠಿಸುವ ಸಂಪ್ರದಾಯವಿದೆ.

**ಮನ್ಯುಸೂಕ್ತ:** ಋಗ್ವೇದದಲ್ಲಿ ಕಂಡುಬರುವ(ಮಂತ್ರ ೧೦ ಸೂಕ್ತ ೮೩ ಮತ್ತು ೮೪) ಮನ್ಯುಸೂಕ್ತವು ತಲಾ ಏಳು ಮಂತ್ರಗಳ ಎರಡು ಸೂಕ್ತಗಳಿಂದ ಕೂಡಿದ್ದು, ಒಟ್ಟು ೧೪ ಮಂತ್ರಗಳಾಗುತ್ತವೆ. ಈ ಎರಡು ಸೂಕ್ತಗಳಿಗೂ ಋಷಿಯು ಮನ್ಯು ತಾಪಸ; ದೇವತೆ ಮನ್ಯು. 'ಯಸ್ತೇ ಮನ್ಯೋ' ಎಂದು ಪ್ರಾರಂಭವಾಗುವ ಮೊದಲನೆಯ ಸೂಕ್ತದ ಮೊದಲ ಮಂತ್ರದ ಛಂದಸ್ಸು ಜಗತೀ. ಉಳಿದ ಆರು ಮಂತ್ರಗಳದ್ದು ತ್ರಿಷ್ಟುಪ್ ಛಂದಸ್ಸು. 'ತ್ವಯಾ ಮನ್ಯೋ' ಎಂದು ಪ್ರಾರಂಭವಾಗುವ ಎರಡನೆಯ ಸೂಕ್ತದ ಮೊದಲ ಮೂರು ಮಂತ್ರಗಳ ಛಂದಸ್ಸು ತ್ರಿಷ್ಟುಪ್; ಕೊನೆಯ ನಾಲ್ಕು ಮಂತ್ರಗಳ ಛಂದಸ್ಸು ಜಗತೀ. ಮಹಾಭಾರತದ ಯುದ್ಧದಲ್ಲಿ ಭೀಮಸೇನನು ದುಃಶಾಸನನ ಎದೆಯನ್ನು ಸೀಳುವಾಗ ಈ ಸೂಕ್ತವನ್ನು ಕಂಡದ್ದರಿಂದ ಭೀಮಸೇನನೂ ಈ ಸೂಕ್ತಕ್ಕೆ ಋಷಿ. ಈ ಸೂಕ್ತದ ಮೂಲಕ ಭೀಮಸೇನನು ದುಃಶಾಸನನ ರಕ್ತವನ್ನು ನರಸಿಂಹ ದೇವರಿಗೆ ಸಮರ್ಪಿಸಿದನಂತೆ.

ಆದ್ದರಿಂದ ಈ ಸೂಕ್ತಕ್ಕೆ ದೇವತೆ ನರಸಿಂಹ. ಇದು ಮುಖ್ಯವಾಗಿ ನರಸಿಂಹ ದೇವರ ಸ್ತುತಿ. ಮುಖ್ಯಪ್ರಾಣನ ಪರವಾಗಿಯೂ ಅರ್ಥಮಾಡುವುದುಂಟು. ಈ ಸೂಕ್ತವನ್ನು ಮುಖ್ಯಪ್ರಾಣ ದೇವರ ಅಭಿಷೇಕದ ಸಮಯದಲ್ಲಿ ಪಠಿಸುವ ಸಂಪ್ರದಾಯವಿದೆ.

**ಬಳಿತ್ಥಾಸೂಕ್ತ:** ಇದು ಋಗ್ವೇದದಲ್ಲಿ ಬರುವ ಸೂಕ್ತ. ಮುಖ್ಯಪ್ರಾಣ ದೇವರು ಈ ಸೂಕ್ತದಿಂದ ಪ್ರತಿಪಾದ್ಯರೇ ಹೊರತು ಲೋಕ ಪ್ರಸಿದ್ಧವಾದ ಅಗ್ನಿಯಲ್ಲ. ಆದ್ದರಿಂದ ಇದನ್ನು ಪ್ರಾಣಾಗ್ನಿ ಸೂಕ್ತವೆಂದೂ ಕರೆಯುತ್ತಾರೆ. ಇದಕ್ಕೆ ಋಷಿಯು ಔಚಿತ್ಯ ದೀರ್ಘ ತಮಸ್ ಅಥವಾ ಭೃಗು ಮತ್ತು ಪ್ರತಿಪಾದ್ಯ ದೇವತೆ ವಾಯು ಎಂಬುದಾಗಿ ಶ್ರೀ ಮಧ್ವಾಚಾರ್ಯರು ತಮ್ಮ ಭಾಷ್ಯಾದಿ ಗ್ರಂಥಗಳಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ಇದು ವಾಯುಪರ ಸೂಕ್ತ. ಇದರ ಛಂದಸ್ಸು ಜಗತೀ. ಮುಖ್ಯಪ್ರಾಣ ದೇವರ ಅಭಿಷೇಕದ ಸಮಯದಲ್ಲಿ ಈ ಸೂಕ್ತವನ್ನು ಪಠಿಸುವ ಸಂಪ್ರದಾಯವಿದೆ.

**ಋಷಭಸೂಕ್ತ:** ಇದು ಋಗ್ವೇದದ ಹತ್ತನೇ ಮಂಡಲದಲ್ಲಿ ೧೬೬ನೇ ಸೂಕ್ತವಾಗಿ ಪಠಿತವಾಗಿದೆ. ಇದನ್ನು ಸಪತ್ನಘ್ನಸೂಕ್ತ ಎಂದೂ ಕರೆಯುತ್ತಾರೆ. ಇದರಲ್ಲಿ ಐದು ಮಂತ್ರಗಳಿವೆ. ಇದು ಶತ್ರುನಾಶಕ್ಕಾಗಿ ಪಠಿಸುವ ಸೂಕ್ತ.

ಮೊದಲ ನಾಲ್ಕು ಮಂತ್ರಗಳ ಛಂದಸ್ಸು ಅನುಷ್ಟುಪ್, ಐದನೆಯದು ಮಹಾಪಂಕ್ತಿ. ಈ ಸೂಕ್ತದ ಋಷಿ ವೈರಾಜ ಋಷಭ ಅಥವಾ ಶಾಕ್ವರ ಋಷಭ. ಮಹಾಭಾರತದ ಯುದ್ಧದಲ್ಲಿ ಭೀಮಸೇನನು ದುರ್ಯೋಧನನ ತಲೆಯನ್ನು ತುಳಿಯುವಾಗ ಈ ಸೂಕ್ತವನ್ನು ಕಂಡನೆಂದು ಶ್ರೀಮಧ್ವಾಚಾರ್ಯರು ತಿಳಿಸುತ್ತಾರೆ. ಆದ್ದರಿಂದ ಈ ಸೂಕ್ತದ ಋಷಿ ಭೀಮಸೇನ. ದೇವತೆ ನರಸಿಂಹ. ಪ್ರಯಾಣ ಕಾಲದಲ್ಲಿ ಈ ಸೂಕ್ತವನ್ನು ಪಠಿಸುವುದರಿಂದ ನರಸಿಂಹನ ರಕ್ಷಣೆ ಇರುವುದರಿಂದ ದಾರಿಯಲ್ಲಿನ ವಿಘ್ನಗಳು ನಾಶವಾಗುತ್ತವೆ. ಈ ಸೂಕ್ತವನ್ನು ಮುಖ್ಯಪ್ರಾಣದೇವರ ಅಭಿಷೇಕದ ಸಮಯದಲ್ಲೂ ಪಠಿಸುವ ಸಂಪ್ರದಾಯವಿದೆ.

* * *

# ಪುರುಷಸೂಕ್ತ

**(ಈ ಸೂಕ್ತವನ್ನು ದೇವರ ಅಭಿಷೇಕ ಮಾಡುವಾಗ ಪಠಿಸಬೇಕು.)**

॥ ಸಹಸ್ರಶೀರ್ಷಾ ನಾರಾಯಣೋ ಋಷಿಃ ಪುರುಷೋ ದೇವತಾ ಅನುಷ್ಟುಪ್ ಛಂದಃ ಅಂತ್ಯಾ ತ್ರಿಷ್ಟುಪ್ ಮಹಾಭಿಷೇಕೇ ವಿನಿಯೋಗಃ ॥

**ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರ ಪಾತ್ । ಸಃ ಭೂಮಿಂ ವಿಶ್ವತೋ ವೃತ್ವಾऽತ್ಯತಿಷ್ಠದ್ದಶಾಂಗುಲಮ್ ॥ ೧ ॥**

ಪುರುಷ ಶಬ್ದದಿಂದ ಮುಖ್ಯತಃ ವಾಚ್ಯನಾದ ನಾರಾಯಣನ ಶಿರಸ್ಸುಗಳು, ಕಣ್ಣುಗಳು, ಪಾದಗಳು, ಉಪಲಕ್ಷಣಯಾ ತೊಡೆ ಮೊದಲಾದ ಎಲ್ಲ ಅಂಗಗಳೂ ಅನಂತವಾಗಿವೆ. ಇಲ್ಲಿ ಸಹಸ್ರ ಶಬ್ದವು ಅನಂತವನ್ನು ಹೇಳುತ್ತದೆ. ಈ ಪುರುಷನು ಭೂಮಿ ಶಬ್ದದಿಂದ ವಾಚ್ಯವಾದ ಬ್ರಹ್ಮಾಂಡದೊಳಗಿನ ಸಮಸ್ತ ಜಗತ್ತನ್ನು ಬಹಳವಾಗಿ ವ್ಯಾಪಿಸಿದ್ದರೂ ಅಂಗುಷ್ಟ ಗಾತ್ರದ ಹೃದಯದಲ್ಲಿಯೂ ಇರುತ್ತಾನೆ. ಅಂದರೆ ಅಲ್ಪವಾದ ಹೃದಯದಲ್ಲಿದ್ದು ಅಚಿಂತ್ಯ ಶಕ್ತಿಯಿಂದ ಇಡೀ ಬ್ರಹ್ಮಾಂಡವನ್ನು ವ್ಯಾಪಿಸಿರುತ್ತಾನೆ.

**ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೨ ॥**

ಹಿಂದೆ ಆಗಿಹೋದ, ಈಗಿರುವ ಮತ್ತು ಮುಂದೆ ಬರಲಿರುವ ಸಕಲ ಜಗತ್ತು ಸದಾ ಕಾಲದಲ್ಲಿಯೂ ಈ ಪುರುಷನ ಅಧೀನವೇ ಆಗಿರುವುದು. ಆತನೇ ಮುಕ್ತರಿಗೂ, ಅಮುಕ್ತರಿಗೂ ಮತ್ತು ಮುಕ್ತಿಗೂ ಸ್ವಾಮಿಯು. ಅಂದರೆ ಮುಕ್ತರಿಗೂ ಅಮುಕ್ತರಿಗೂ ಆಶ್ರಯನು. ಈ ಪುರುಷನು ಅನ್ನ ಶಬ್ದದಿಂದ ವಾಚ್ಯಳಾದ ಶ್ರೀರಮಾದೇವಿಯನ್ನೂ ಮೀರಿನಿಂತಿರುವನು.

**ಏತಾವಾನಸ್ಯ ಮಹಿಮಾऽತೋ ಜ್ಯಾಯಾಂಶ್ಚ ಪೂರುಷಃ । ಪಾದೋऽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ ೩ ॥**

"ಸಹಸ್ರಶೀರ್ಷಾ ಪುರುಷಃ" ಇತ್ಯಾದಿ ಹಿಂದೆ ಹೇಳಿದ್ದಕ್ಕಿಂತಲೂ

ಅತ್ಯಧಿಕವಾಗಿದೆ ಈತನ ಮಹಿಮೆ. ಸಮಸ್ತ ಭೂತಗಳೂ ಇವನ ಒಂದು ಭಿನ್ನಾಂಶ ಮಾತ್ರ. ಇವನ ಸ್ವರೂಪಭೂತವಾದ ಮೂರು ಅಂಶಗಳು ''ದಿವಿ'' ಎನಿಸಿಕೊಳ್ಳುತ್ತದೆ. ''ಭೂರ್ಭುವ ಸ್ವಃ'' ಎಂಬ ಮೂರು ಲೋಕಗಳಿಂದ ಬಹಳ ಎತ್ತರದಲ್ಲಿರುವ ಅಂತರಿಕ್ಷದ ಮೇಲಿರುವ ಶ್ವೇತದ್ವೀಪ ಅನಂತಾಸನ ವೈಕುಂಠಗಳು ''ದ್ಯು'' ಎಂದು ಕರೆಸಿಕೊಳ್ಳುವುದರಿಂದ ತದ್ಗತವಾದ ರೂಪವು ''ದಿವಿ'' ಎಂದು ಪ್ರಸಿದ್ಧವಾಗಿದೆ.

**ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋऽಸ್ಯೇಹಾ ಭವತ್ಪುನಃ । ತತೋ ವಿಶ್ವಙ್ ವ್ಯಕ್ರಾಮತ್ಸಾಶನಾऽನಶನೇ ಅಭಿ ।। ೪ ।।**

ಈ ಪುರುಷನು ದ್ಯುಲೋಕದಿಂದ ಉಪಲಕ್ಷಿತವಾದ ಮೂರು ಲೋಕಗಳಿಂದ ಹೊರಗಿರುವ ಉತ್ತಮವಾದ ಶ್ವೇತದ್ವೀಪಾದಿ ಮೂರು ಧಾಮಗಳಲ್ಲಿರುವವನಾಗಿ ಉತ್ಕೃಷ್ಟನಾಗಿದ್ದಾನೆ. ಹೀಗಿದ್ದರೂ ಈ ಪರಮಾತ್ಮನ ಭಿನ್ನವಾದ ಪಾದವು ನಿಯಮ್ಯವಾದ ಜಗತ್ತಿನಲ್ಲಿ ಪುನಃ ಇದ್ದೇ ಇರುವುದು. ''ವಿಷ್ವಕ್'' ಶಬ್ದದಿಂದ ಕರೆಸಿಕೊಳ್ಳುವ ''ತ್ರಿಪಾತ್'' ಪುರುಷನು ನಾನಾವಿಧವಾದ ದೇವಮಾನುಷ ತಿರ್ಯಗಾದಿ ಪ್ರಾಣಿಗಳಲ್ಲಿ ವ್ಯಾಪ್ತನಾಗಿದ್ದಾನೆ. ಅಲ್ಲದೆ ದೇವತೆಗಳನ್ನು (ಅನಶನರು) ಮತ್ತು ತದಿತರ ವಿದ್ವಜ್ಜನರಾದ ಋಷಿಗಳನ್ನು (ಸಾಶನರು) ವಿಶೇಷವಾಗಿ ಆಕ್ರಮಿಸಿ ಇದ್ದಾನೆ.

**ತಸ್ಮಾದ್ವಿರಾಳಜಾಯತ ವಿರಾಜೋ ಅಧಿ ಪೂರುಷಃ । ಸಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿಮಥೋ ಪುರಃ ।।೫।।**

ಪುರುಷರೂಪಿ ನಾರಾಯಣನಿಂದ ವಿಶೇಷವಾಗಿ ಪ್ರಕಾಶಿಸುತ್ತದೆ ಎಂಬ ಕಾರಣದಿಂದ ವಿರಾಟ್ ಎಂದು ಹೇಳಲ್ಪಡುವ ಬ್ರಹ್ಮಾಂಡವು ಹುಟ್ಟಿತು. ಬ್ರಹ್ಮಾಂಡದಿಂದ ವಿರಾಣ್ಣಾಮ ಚತುರ್ಮುಖ ಬ್ರಹ್ಮ ದೇವರು ಹುಟ್ಟಿದರು. ಹೀಗೆ ಹುಟ್ಟಿದ ಬ್ರಹ್ಮದೇವರು ಅನಂತರ ಹುಟ್ಟಿದ ರುದ್ರಾದಿ ಸಮಸ್ತ ಜಗತ್ತನ್ನು (ಭೂಮಿಂ) ಹಾಗೂ ತಮಗಿಂತ

ಮೊದಲು ಹುಟ್ಟಿದ ಬ್ರಹ್ಮಾಂಡವನ್ನು ಸಹ ಅತಿಕ್ರಮಿಸಿರುವರು. ಚತುರ್ಮುಖ ಬ್ರಹ್ಮದೇವರು ರುದ್ರಾದಿ ಜಗತ್ತಿಗಿಂತ ಅಧಿಕರು.

ಇವರೆಲ್ಲರಿಗಿಂತ ಪುರುಷರೂಪಿ ನಾರಾಯಣನು ಅಧಿಕ.

**ಯತ್ಪುರುಷೇನ ಹವಿಷಾ ದೇವಾ ಯಜ್ಞಮತನ್ವತ । ವಸಂತೋ ಅಸ್ಯಾಸಿದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ।।೬।।**

ಹೀಗೆ ಮೊದಲನೆಯ ವರ್ಗದ ಐದು ಋಕ್ಕುಗಳಿಂದ ವಿಷ್ಣುವಿನ ಸರ್ವೋತ್ತಮತ್ವವನ್ನು ಹೇಳಿ, ಎರಡನೆಯ ವರ್ಗದ ಋಕ್ಕುಗಳಿಂದ ದೇವತೆಗಳು ಮಾನಸ ಯಜ್ಞದಿಂದ ಸರ್ವೋತ್ತಮನಾದ ಆ ಪುರುಷನನ್ನು ಆರಾಧಿಸಿದರೆಂದು ಹೇಳುತ್ತಾರೆ. ಮನಸ್ಸಿನಲ್ಲಿ ಸಂಕಲ್ಪಿತ ಚತುರ್ಮುಖಾಖ್ಯ ಪಶುರೂಪಿ ಹವಿಸ್ಸಿನಿಂದ ವಿಷ್ಣುವನ್ನು ಉದ್ದೇಶ ಮಾಡಿಕೊಂಡು ಯಜ್ಞವನ್ನು ಮಾಡಿದರು. ಈ ಮಾನಸ ಯಜ್ಞಕ್ಕೆ ವಸಂತ ಮಾಸಾಭಿಮಾನಿ ದೇವತೆಯೇ ತುಪ್ಪ, ಗ್ರೀಷ್ಮಾಭಿಮಾನಿಯೇ ಕಟ್ಟಿಗೆ, ಶರದಭಿಮಾನಿಯೇ ಹವಿಸ್ಸು. ಹೀಗೆ ವಿಷ್ಣುವಿನ ಅಂಗಗಳಿಂದ ಹುಟ್ಟಿದ ಹವಿರಾದಿ ಪದಾರ್ಥಗಳಿಂದ ದೇವತೆಗಳು ಮಾನಸಯಜ್ಞ ಮಾಡಿದರು.

**ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ ಪುರುಷಂ ಜಾತಮಗ್ರತಃ । ತೇನ ದೇವಾಃ ಅಯಜಂತ ಸಾಧ್ಯಾ ಋಷಯಶ್ಚ ಯೇ ।। ೭ ।।**

ಬ್ರಹ್ಮಾದಿ ದೇವತೆಗಳು, ಸಾಧ್ಯರು, ಋಷಿಗಳು, ಎಲ್ಲರೂ ರುದ್ರಾದಿ ಸಮಸ್ತ ದೇವತೆಗಳನ್ನು ಮನಸ್ಸಿನಿಂದ (ಬರ್ಹಿಷಾ) ಪಶುತ್ವೇನ ಕಲ್ಪಿಸಿ ಪ್ರೋಕ್ಷಿಸಿ ವಿಷ್ಣುವನ್ನು ಆರಾಧಿಸಿದರು.

**ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷದಾಜ್ಯಮ್ । ಪಶೂನ್ ತಾಂಶ್ಚಕ್ರೇ ವಾಯವ್ಯಾನಾರಣ್ಯಾನ್ ಗ್ರಾಮ್ಯಾಶ್ಚಯೇ ।। ೮ ।।**

ಈ ಮಾನಸಯಜ್ಞದಿಂದ ಪ್ರಸನ್ನನಾದ ಭಗವಂತನಿಂದ ಹೊರಗಿನ ಯಜ್ಞಸಾಧನ ಪದಾರ್ಥಗಳು ಹುಟ್ಟಿದವೆಂದು ಹೇಳುತ್ತಾರೆ. ಈ ಪುರುಷನಿಂದ ಪ್ರಧಾನ ಹೋಮಗಳು ಹುಟ್ಟಿದವು. ಮೊಸರು ಕಲಿತ ತುಪ್ಪವು ಹುಟ್ಟಿತು. ಅಂತರಿಕ್ಷಲೋಕದಲ್ಲಿ ಹುಟ್ಟಿದ ಶ್ವೇತ ಪಶುಗಳನ್ನು, ಅರಣ್ಯದಲ್ಲಿ ಹುಟ್ಟಿದ ಜಿಂಕೆ, ಗ್ರಾಮಗಳಲ್ಲಿ ಹುಟ್ಟಿದ ಆಡು ಮುಂತಾದವನ್ನು ಪುರುಷನು ಉಂಟುಮಾಡಿದನು.

**ತಸ್ಮಾದ್ಯಜ್ಞಾತ್ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ । ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥೯॥**

ಸರ್ವಹುತನಾದ ವಿಷ್ಣುವಿನಿಂದ ಅಪ್ರಧಾನವಾದ ಎಲ್ಲ ಹೋಮಗಳು, ಋಕ್ ಸಾಮಾಭಿಮಾನಿ ದೇವತೆಗಳು ಹಾಗೂ ತತ್ತನ್ನಾಮಕ ವೇದಗಳು ಹುಟ್ಟಿದವು. ಅವನಿಂದಲೇ ಗಾಯತ್ರ್ಯಾದಿ ಛಂದಸ್ಸುಗಳು ಹುಟ್ಟಿದವು. ಯಜುವು ಹುಟ್ಟಿತು.

**ತಸ್ಮಾದಶ್ವಾ ಅಜಾಯಂತ ಯೇ ಕೇ ಚೋ ಭಯಾದತಃ । ಗಾವೋ ಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥ ೧೦ ॥**

ವಿಷ್ಣುವಿನಿಂದ ಕುದುರೆಗಳು ಹುಟ್ಟಿದವು. ಮೇಲೆ, ಕೆಳಗೆ ಚೆನ್ನಾಗಿ ಹಲ್ಲುಗಳಿರುವ ಹೇಸರಕತ್ತೆ ಮೊದಲಾದವು ಹುಟ್ಟಿದವು. ಗೋವುಗಳು, ಆಡು ಮೊದಲಾದವು ಸಹ ಹುಟ್ಟಿದವು.

**ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯೇತೇ ॥ ೧೧ ॥**

ಇದು ದ್ವಿತೀಯ ವರ್ಗದ ಮೊದಲ ಋಕ್ಕು. ಇಲ್ಲಿ ತತ್ತ್ವವನ್ನು ತಿಳಿಯಲು ಶಿಷ್ಯನು ಪ್ರಶ್ನಿಸುತ್ತಾನೆ. ಬ್ರಹ್ಮಾದಿ ದೇವತೆಗಳು ಪುರುಷನನ್ನು ಎಷ್ಟು ವಿಧವಾಗಿ ಚಿಂತಿಸಿದರು, ಯಜ್ಞದಲ್ಲಿ ಇದ್ದರೂ ವಿಶೇಷವಾಗಿ ಮನಸ್ಸಿನಿಂದ ನಾನಾರೀತಿಯಿಂದ ಹೇಗೆ ಕಲ್ಪಿಸಿದರು ಎಂಬುದನ್ನೇ ಪ್ರಶ್ನೆಯ ರೂಪದಲ್ಲಿ ವಿಶದಪಡಿಸುತ್ತಾರೆ. ಮುಖವು ಯಾವುದಕ್ಕೆ ಜನಕವಾಯಿತು(ಕಾರಣವಾಯಿತು)? ಬಾಹುಗಳು ಯಾವುದಕ್ಕೆ ಜನಕವಾದವು? ತೊಡೆಗಳು ಹಾಗೂ ಪಾದಗಳು ಯಾವುದಕ್ಕೆ ಜನಕವಾದವು?

**ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ। ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥**

ಹಿಂದಿನ ಪ್ರಶ್ನೆಗೆ ಇಲ್ಲಿ ಉತ್ತರ ಕೊಡುತ್ತಾರೆ. ವಿಷ್ಣುವಿನ ಮುಖದಿಂದ ಬ್ರಾಹ್ಮಣ ಹಾಗೂ ಬ್ರಾಹ್ಮಣ ಜಾತಿಯ ಅಭಿಮಾನಿ ಬ್ರಹ್ಮನೂ, ಬಾಹುಗಳಿಂದ ಕ್ಷತ್ರಿಯ ಹಾಗೂ ಕ್ಷತ್ರಾಭಿಮಾನಿ ವಾಯುವೂ, ತೊಡೆಗಳಿಂದ ವೈಶ್ಯ ಹಾಗೂ ತದಭಿಮಾನಿ ನಾಸಿಕ್ಯ

ವಾಯುವೂ, ಪಾದಗಳಿಂದ ಶೂದ್ರ ಹಾಗೂ ತದಭಿಮಾನಿ ನಿಋತಿಯೂ ಹುಟ್ಟಿದರು.

**ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ। ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥ ೧೩ ॥**

ಈ ವಿರಾಟ್ ಪುರುಷನ ಮನಸ್ಸಿನಿಂದ ಚಂದ್ರನು ಹುಟ್ಟಿದನು ಮತ್ತು ಅದನ್ನು ಆಶ್ರಯಿಸಿರುವನು. ಕಣ್ಣುಗಳಿಂದ ಸೂರ್ಯನು ಹುಟ್ಟಿ ಅದನ್ನೇ ಆಶ್ರಯಿಸಿರುವನು. ಮುಖದಿಂದ ಇಂದ್ರ ಮತ್ತು ಅಗ್ನಿ, ಪ್ರಾಣದಿಂದ ಮುಖ್ಯವಾಯು, ನಾಸಿಕ್ಯವಾಯು ಇವರುಗಳು ಹುಟ್ಟಿ ಆಯಾ ಅಂಗಗಳನ್ನೇ ಆಶ್ರಯಿಸಿರುವರು.

**ನಾಭ್ಯಾ ಆಸೀದಂತರಿಕ್ಷಂ ಶೀರ್ಷ್ಣೋ ದ್ಯೌಃ ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಃಶ್ರೋತ್ರಾತ್ತಥಾ ಲೋಕಾನಕಲ್ಪಯನ್ ॥**

ವಿಷ್ಣುವಿನ ನಾಭಿಯಿಂದ ಅಂತರಿಕ್ಷವು ಹುಟ್ಟಿ ಅದನ್ನೇ ಆಶ್ರಯಿಸಿತು. ಶಿರಸ್ಸಿನಿಂದ ದ್ಯು ಲೋಕ, ಪಾದಗಳಿಂದ ಭೂಮಿ, ಕಿವಿಗಳಿಂದ ದಿಕ್ಕುಗಳು ಮತ್ತು ಪಾತಾಳಾದಿ ಲೋಕಗಳು ಹುಟ್ಟಿದವು. ಅವುಗಳು ತಮ್ಮ ಉತ್ಪತ್ತಿಗೆ ಕಾರಣವಾದ ಅಂಗಗಳನ್ನೇ ಆಶ್ರಯಿಸಿದವು. ಇಲ್ಲಿನ ಉತ್ಪತ್ತಿಯ ಕ್ರಮದಲ್ಲಿ ಆಯಾ ಅಭಿಮಾನಿ ದೇವತೆ ಗಳನ್ನೂ ಇಟ್ಟುಕೊಳ್ಳಬೇಕು.

**ಸಪ್ತಾಸ್ಯಾಸನ್ಪರಿಧಯಸ್ತ್ರಿಃ ಸಪ್ತ ಸಮಿಧಃ ಕೃತಾಃ । ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಮ್ ॥ ೧೫ ॥**

"ತಂ ಯಜ್ಞಂ" ಎಂದು ಹಿಂದೆ ಹೇಳಿದ ಮಾನಸ ಯಜ್ಞವನ್ನು ಇಲ್ಲಿ ಸ್ವಲ್ಪ ವಿವರಿಸಿ ಹೇಳುವರು. ಬ್ರಹ್ಮಾದಿ ದೇವತೆಗಳು, ಸಾಧ್ಯರು, ಋಷಿಗಳು ಮಾಡಿದ ಮಾನಸಯಜ್ಞದಲ್ಲಿ ಗಾಯತ್ರ್ಯಾದಿ ಏಳು ಛಂದಸ್ಸುಗಳನ್ನು ಪರಿಧಿಗಳೆಂದೂ (ದರ್ಭವಿಶೇಷಗಳು), ಹನ್ನೆರಡು ತಿಂಗಳುಗಳು, ಐದು ಋತುಗಳು, ಮೂರು ಲೋಕಗಳು ಮತ್ತು ಸೂರ್ಯ ಇವುಗಳನ್ನು ಇಪ್ಪತ್ತೊಂದು ಸಮಿತ್ತುಗಳಾಗಿಯೂ ಭಾವಿಸಿ, ರುದ್ರನನ್ನು ಪಶುವಾಗಿ ಚಿಂತಿಸಿ ಮಾನಸ ಯಜ್ಞವನ್ನು ಮಾಡಿದರು.

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿಧರ್ಮಾಣಿ ಪ್ರಥಮಾ ನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ।। ೧೬ ।।**

ಹೀಗೆ ದೇವತೆಗಳು ಮಾಡಿದ ಯಜ್ಞಕ್ಕೆ ಫಲವನ್ನು ಹೇಳುತ್ತಾರೆ. ಬ್ರಹ್ಮಾದಿಗಳು ದ್ರವ್ಯ ಮತ್ತು ಮಾನಸ ಯಜ್ಞದಿಂದ ವಿಷ್ಣುವನ್ನು ಕುರಿತು ಯಜ್ಞ ಮಾಡಿದ್ದರಿಂದ ತಮಗೆ ಯೋಗ್ಯವಾದ ಪದವಿಗಳನ್ನು ಹೊಂದಿದರು ಹಾಗೂ ಆಯಾ ಲೋಕಗಳಿಗೆ ಮುಖ್ಯ ಧಾರಕರಾದರು. ಮಹಾತ್ಮರಾದ ಅವರು ತಮ್ಮ ಸಾಧನೆ ಪೂರ್ತಿಯಾದ ಬಳಿಕ ಪೂರ್ಣಸುಖಾತ್ಮಕವಾದ ಮೋಕ್ಷವನ್ನು ಹೊಂದಿದರು. ದೇವತೆಗಳು ಭಗವತ್ಪೂಜೆಯ ಫಲವಾಗಿ ಮೋಕ್ಷಾದಿ ಪುರುಷಾರ್ಥವನ್ನು ಗಳಿಸಿದರು. ಆದ್ದರಿಂದ ಎಲ್ಲರೂ ಅವಶ್ಯವಾಗಿ ದ್ರವ್ಯ ಮತ್ತು ಮಾನಸ ಸಾಧನಗಳಿಂದ ಸರ್ವೋತ್ತಮನಾದ ವಿಷ್ಣುವನ್ನು ಆರಾಧಿಸಬೇಕು.

**(ಇತಿ ಪುರುಷಸೂಕ್ತಮ್)**

## ವಿಷ್ಣುಸೂಕ್ತ

ನಿರ್ಮಾಲ್ಯ ವಿಸರ್ಜನೆಯ ಅನಂತರ ದೇವರಿಗೆ ಅಭಿಷೇಕ ಮಾಡುವಾಗ

ಈ ಸೂಕ್ತವನ್ನು ಪಠಿಸಬೇಕು

**ಓಂ ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತಧಾಮಭಿಃ ।। ೧ ।।**

ವಿಷ್ಣುವು ಅಸುರರ ವಶದಲ್ಲಿದ್ದ ಭೂಮಿಯೇ ಮೊದಲಾದ ಏಳು ಲೋಕಗಳನ್ನು ಆಕ್ರಮಿಸಿ ದೇವತೆಗಳನ್ನು ಅವರಿಗೆ ಯೋಗ್ಯವಾದ ಸ್ಥಾನಗಳಲ್ಲಿ ಸ್ಥಾಪಿಸಿದ್ದಾನೆ. ಅಂಥಹ ದೇವತೆಗಳು ನಮ್ಮನ್ನು ರಕ್ಷಿಸಲಿ.

**ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ । ಸಮೂಹ್ಳಮಸ್ಯ ಪಾಂಸುರೇ ।। ೨ ।।**

ವಿಷ್ಣುವು ಕೇವಲ ಮೂರು ಹೆಜ್ಜೆಗಳನ್ನು ಇಟ್ಟು ಇಡೀ ವಿಶ್ವವನ್ನೇ ಆಕ್ರಮಿಸಿದನು. ವಿಶ್ವವು ವಿಷ್ಣುವಿನ ಪಾದದಲ್ಲಿ ಧೂಳಿನಂತೆ ಶೋಭಿಸಿತು.

**ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ। ತತೋ ಧರ್ಮಾಣಿ ಧಾರಯನ್ ॥ ೩ ॥**

ಅಮಿತ ಶಕ್ತಿಯುಳ್ಳ ವಿಷ್ಣುವು ಮೂರು ಲೋಕಗಳನ್ನು ಮೀರಿ ನಿಂತವನು. ಅವುಗಳಿಗೆ ಆತ ರಕ್ಷಕನಾಗಿರುವನು. ವಿಶ್ವಧಾರಕನೂ ಆಗಿರುವುದರಿಂದ ದೇವತೆಗಳಿಗೂ ಅವನೇ ಧಾರಕನಾಗಿರುವನು.

**ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ । ಇಂದ್ರಸ್ಯ ಯುಜ್ಯಸ್ಸಖಾ ॥ ೪ ॥**

ವಿಷ್ಣುವು ಮಾಡುವ ಲೀಲೆಗಳನ್ನು ನೋಡಿರಿ. ಜೀವಿಗಳ ಎಲ್ಲ ಕಾರ್ಯಗಳೂ ಅವನಿಂದಲೇ ನಡೆಯುತ್ತಿವೆ. ಅವನು ಇಂದ್ರ ಮತ್ತುವಾಯುವಿಗೆ ಸದಾ ಜೊತೆಯಲ್ಲಿರುವ ಮಿತ್ರನಾಗಿದ್ದಾನೆ.

**ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಮ್ ॥ ೫ ॥**

ಆ ವಿಷ್ಣುವಿನ ಶ್ರೇಷ್ಠವಾದ ಸ್ವರೂಪವನ್ನು ಯೋಗಿಗಳು ಸದಾಕಾಲವೂ ನೋಡುತ್ತಿರುತ್ತಾರೆ. ತೋಜೋರೂಪವಾದ ಅವನ ಪ್ರಭೆಯು ಆಕಾಶದಲ್ಲಿ ಹರಡಿದ್ದರೂ ಅವನು ಸಾಮಾನ್ಯ ಕಣ್ಣಿಗೆ ಗೋಚರನಾಗನು.

**ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ । ವಿಷ್ಣೋರ್ಯತ್ಪರಮಂ ಪದಮ್ ॥ ೬ ॥**

ಜೀವನ್ಮುಕ್ತರೆನಿಸಿದ ವೇದಋಷಿಗಳು ವೇದಗಳಲ್ಲಿ ಮುಖ್ಯವಾಗಿ ಸರ್ವೋತ್ತಮನಾದ ವಿಷ್ಣುವಿನ ಸ್ವರೂಪವನ್ನೇ ವರ್ಣಿಸಿರುವರು.

**(ಇತಿ ವಿಷ್ಣುಸೂಕ್ತಮ್)**

## ಅಂಭ್ರಣೀಸೂಕ್ತ

**(ಈ ಸೂಕ್ತವನ್ನು ನಿರ್ಮಾಲ್ಯ ವಿಸರ್ಜನೆಯಲ್ಲಿ ಪಠಿಸಬೇಕು)**

॥ ಅಹಂ ರುದ್ರೇಭಿರಿತಿ ಅಷ್ಟರ್ಚಸ್ಯ ಸೂಕ್ತಸ್ಯ ವಾಗಂಭೃಣೀ ಋಷಿಃ ಪರಮಾತ್ಮಾ ದೇವತಾ ತ್ರಿಷ್ಟುಪ್ ದ್ವಿತೀಯಾ ಜಗತೀ ದೇವಸ್ಯ

ನಿರ್ಮಾಲ್ಯ ವಿಸರ್ಜನೇ ವಿನಿಯೋಗಃ ||

**ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ || ೧ ||**

ನಾನು ಏಕಾದಶ ರುದ್ರರು, ಅಷ್ಟವಸುಗಳು, ದ್ವಾದಶ ಆದಿತ್ಯರು ಮತ್ತು ಹತ್ತು ಮಂದಿ ವಿಶ್ವೇದೇವತೆಗಳಿಂದ ಕೂಡಿ ಸಂಚರಿಸುತ್ತೇನೆ. ನಾನು ಮಿತ್ರಾ-ವರುಣ ಇವರಿಬ್ಬರನ್ನು ಹೊತ್ತು ಸಲಹುತ್ತೇನೆ. ನಾನು ಇಂದ್ರ, ಅಗ್ನಿ, ವರುಣ ಮತ್ತು ಅಶ್ವಿನೀ ದೇವತೆಗಳನ್ನು ಪೋಷಿಸುತ್ತೇನೆ.

**ಅಹಂ ಸೋಮಮಾಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್ । ಅಹಂ ದಧಾಮಿ ದ್ರವಿಣಂ ಹವಿಷ್ಮತೇ ಸುಪ್ರಾವ್ಯೇಽಯಜಮಾನಾಯ ಸುನ್ವತೇ ||೨||**

ಕತ್ತಲೆಯನ್ನು ನೀಗುವ ಚಂದ್ರನನ್ನು, ತ್ವಷ್ಟಾರನೆನಿಸಿರುವ ಗರುಡನನ್ನು, ಪೂಷನೆನಿಸಿ ಅರಿವಿಗೆ ಪೋಷಣೆ ನೀಡುವ ಶೇಷನನ್ನು ಮತ್ತು ಭಗನೆನಿಸಿರುವ ಶಿವನನ್ನು ನಾನು ಪೋಷಿಸುತ್ತೇನೆ. ಭಕ್ತಿರಸವನ್ನು ಸೋಮರಸದ ರೂಪದಲ್ಲಿ ಹವಿಸ್ಸನ್ನಾಗಿ ಅರ್ಪಿಸುವ ಯಜ್ಞದೀಕ್ಷಿತನಿಗೆ ವಿಫುಲವಾದ ಸಂಪತ್ತನ್ನು ನಾನೇ ನೀಡುತ್ತೇನೆ.

**ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞೀಯಾನಾಮ್ । ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ || ೩ ||**

ಭೂರೂಪದಲ್ಲಿ ನಾನು ಈ ವಿಶ್ವಕ್ಕೆಲ್ಲ ಅಭಿಮಾನಿನಿ. ಐಶ್ವರ್ಯ ಕೊಡುವವಳು ನಾನೇ. ಭಗವಂತನನ್ನು ತಿಳಿದವರಲ್ಲಿ ಮೊದಲಿಗಳಾದ ನನಗೇ ಯಜ್ಞದಲ್ಲಿ ಮೊದಲ ಆರಾಧನೆ. ಹಲವು ಕಡೆಗಳಲ್ಲಿ ಹಲವು ರೂಪಗಳಿಂದಿದ್ದು ವಿವಿಧ ಜೀವರುಗಳಿಗೆ ಯೋಗ್ಯವಾದ ಸಂಪದವನ್ನು ನೀಡುತ್ತ ಪೋಷಿಸುತ್ತಿರುವೆನೆಂದು ದೇವತೆಗಳು ಮತ್ತು ಜ್ಞಾನಿಗಳು ನನ್ನನ್ನು ಉಪಾಸನೆ ಮಾಡುತ್ತಾರೆ.

**ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ । ಅಮಂತವೋ ಮಾಂ ತ ಉಪಕ್ಷಿಯಂತಿ**

**ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ॥ ೪ ॥**

ಎಲ್ಲರೂ ನನ್ನಿಂದಲೇ ಅನ್ನವನ್ನು ಉಣ್ಣುತ್ತಾರೆ ಹಾಗೂ ಉಣ್ಣುವ ಶಕ್ತಿಯನ್ನು ಪಡೆಯುತ್ತಾರೆ. ನನ್ನಿಂದಲೇ ನೋಡುತ್ತಾರೆ, ಉಸಿರಾಡುತ್ತಾರೆ ಹಾಗೂ ಕೇಳುತ್ತಾರೆ. ನನ್ನನ್ನು ತಿಳಿಯದ ಅಜ್ಞಾನಿಗಳು ನಾಶವಾಗುತ್ತಾರೆ. ಶ್ರವಣಾದಿ ಗಳಿಂದ ನನ್ನನ್ನು ಅರಿತ ಹೇ ಜ್ಞಾನಿಯೇ, ನಾನು ಹೇಳುವುದನ್ನು ಶ್ರದ್ಧೆಯಿಂದ ಕೇಳು.

**ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ । ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ ೫ ॥**

ದೇವತೆಗಳೂ ಹಾಗೂ ಜ್ಞಾನಿಗಳೂ ಬಹಳ ಗೌರವದಿಂದ ಗ್ರಹಿಸುವ ಈ ಮಾತನ್ನು ನಾನೇ ಸ್ವತಃ ಹೇಳುತ್ತಿದ್ದೇನೆ. ನನ್ನ ಇಚ್ಛೆಯಂತೆ ಯಾರನ್ನಾದರೂ ರುದ್ರ ಅಥವಾ ಬ್ರಹ್ಮ ಪದವಿಯಲ್ಲಿ ಕೂರಿಸುತ್ತೇನೆ. ನನ್ನ ಮನಸ್ಸಿಗೆ ಬಂದಂತೆ ಯಾರನ್ನಾದರೂ ಋಷಿಯನ್ನಾಗಿ ಅಥವಾ ಜ್ಞಾನಿಯನ್ನಾಗಿ ಮಾಡುತ್ತೇನೆ.

**ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ । ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆವಿವೇಶ ॥ ೬ ॥**

ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸುವ ಜಗತ್ತಿನ ಸಂಹಾರ ಶಕ್ತಿಯಾದ ರುದ್ರನನ್ನು ಸಂಹರಿಸಲೆಂದು ಬಿಲ್ಲನ್ನು ಹೆದೆಯೇರಿಸುತ್ತೇನೆ. ಸಜ್ಜನರಿಗೆ ಆನಂದಮಯವಾದ ಮುಕ್ತಿಯನ್ನು ನಾನೇ ಕರುಣಿಸುತ್ತೇನೆ. ಭೂಮಿ ಅಂತರಿಕ್ಷಗಳನ್ನು ವ್ಯಾಪಿಸಿ ಅವುಗಳನ್ನು ನಿಯಮಿಸುತ್ತೇನೆ.

**ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮಯೋನಿರಪ್ಸ್ವಂತಃ ಸಮುದ್ರೇ । ತತೋ ವಿತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪಸ್ಪೃಶಾಮಿ ॥೭॥**

ಸೃಷ್ಟಿಕರ್ತನಾದ ಬ್ರಹ್ಮನನ್ನು ಸುಷುಮ್ನೆಯ ಮೂಲಕ ನನ್ನ ಬೈತಲೆಯಿಂದ ಹಡೆದಿದ್ದೇನೆ. ನನ್ನ ಇಷ್ಟೆಲ್ಲ ಮಹಿಮೆಗೆ ಕಾರಣನಾದ ನಾರಾಯಣನು ಸಮುದ್ರದ ನೀರಿನೊಳಗೆ ಇದ್ದಾನೆ. ಎಲ್ಲ ಲೋಕಗಳೂ

ಅವನಿಂದ ಅನಾಯಾಸವಾಗಿ ಧರಿಸಲ್ಪಟ್ಟಿವೆ. ಅವನಿಂದಾಗಿಯೇ ಎಲ್ಲ ಲೋಕಗಳನ್ನು ನಾನು ವ್ಯಾಪಿಸಿ ಧರಿಸಿದ್ದೇನೆ.

**ಅಹಮೇವ ವಾತ ಇವ ಪ್ರವಾಮ್ಯಾರಭಮಾಣಾ ಭುವನಾನಿ ವಿಶ್ವಾ । ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ ।। ೮ ।।**

ಹರಿಯ ಅನುಗ್ರಹದಿಂದ ಎಲ್ಲ ಲೋಕಗಳಿಗೆ ಸೃಷ್ಟ್ಯಾದಿಗಳನ್ನು ಉಂಟುಮಾಡುತ್ತ ವಾಯುವಿನಂತೆ ವಿಶ್ವನ್ನೆಲ್ಲ ಪರಿಮಳಭರಿತ ಗೊಳಿಸುವವಳು ನಾನೇ. ನನ್ನ ಭೂ ಮತ್ತು ಶ್ರೀ ರೂಪಕ್ಕಿಂತಲೂ ಶ್ರೀಹರಿಯೇ ಶ್ರೇಷ್ಠನು. ನನ್ನ ಮಹಿಮೆಗೆ ಪರಿಮಿತಿಯಿದೆ. ನನ್ನ ಮಹಿಮೆಗೆ ಕಾರಣನಾದ ಹರಿಯ ಮಹಿಮೆಯು ಅಪರಿಮಿತ.

**(ಇತಿ ಅಂಭ್ರಣೀಸೂಕ್ತಮ್)**

## ಮನ್ಯುಸೂಕ್ತ

।। ಯಸ್ತೇ ಮನ್ಯೋ ಇತಿ ಸಪ್ತರ್ಚಸ್ಯ ಸೂಕ್ತಸ್ಯ ತಾಪಸೋ ಮನ್ಯುರ್ಮನ್ಯುಸ್ತ್ರಿಷ್ಟುಪ್ ಆದ್ಯಾ ಜಗತೀ । ತ್ವಯಾ ಮನ್ಯೋ ಇತಿ ಸಪ್ತರ್ಚಸ್ಯ ಸೂಕ್ತಸ್ಯ ತಾಪಸೋ ಮನ್ಯುರ್ಮನ್ಯುಸ್ತ್ರಿಷ್ಟುಪ್ ಅಂತ್ಯಾಶ್ಚತಸ್ರೋ ಜಗತಃ ಮುಖ್ಯಪ್ರಾಣಾಭಿಷೇಕೇ ವಿನಿಯೋಗಃ ।।

**ಯಸ್ತೇ ಮನ್ಯೋಽವಿಧದ್ವಜ್ರ ಸಾಯಕ ಸಹ ಓಜಃ ಪುಷ್ಯತಿ ವಿಶ್ವಮಾನುಷಕ್ । ಸಾಹ್ಯಾಮ ದಾಸಮಾರ್ಯಂ ತ್ವಯಾ ಯುಜಾ ಸಹಸ್ಕೃತೇನ ಸಹಸಾ ಸಹಸ್ವತಾ।।೧।।**

ಯಾರಿಂದಲೂ ಮಣಿಸಲಾಗದ ವಜ್ರದಂತಹ ಬಾಣ ಮತ್ತು ಖಡ್ಗಗಳನ್ನು ಧರಿಸಿರುವ ಹೇ ನರಸಿಂಹನೇ, ರುದ್ರದೇವರ ಒಳಗಿದ್ದು ನಿಯಮನ ಮಾಡುವ ಜ್ಞಾನಸ್ವರೂಪಿಯಾದ ನಿನ್ನ ಶಕ್ತಿಯ ಪ್ರಭಾವದಿಂದಲೇ ಇಡೀ ವಿಶ್ವವು ಪೋಷಿತವಾಗಿದೆ. ನಿನ್ನನ್ನು ಆರಾಧಿಸುವುದರಿಂದ ನಾವು ಕ್ಷುದ್ರ ಶಕ್ತಿಗಳನ್ನು ನಿವಾರಿಸಿಕೊಂಡು ಇಡೀ ವಿಶ್ವವನ್ನೇ ಗೆಲ್ಲಬಲ್ಲೆವು.

**ಮನ್ಯುರಿಂದ್ರೋ ಮನ್ಯುರೇವಾಸದೇವೋ ಮನ್ಯುರ್ಹೋತಾ**

**ವರುಣೋ ಜಾತವೇದಾಃ । ಮನ್ಯುಂ ವಿಶ ಈಳತೇ ಮಾನುಷೀ ರ್ಯಾಃ ಪಾಹಿ ನೋ ಮನ್ಯೋ ತಪಸಾ ಸಜೋಷಾಃ ॥ ೨ ॥**

ಹೇ ನರಸಿಂಹ, ಇಂದ್ರನಲ್ಲಿ ಇಂದ್ರನಾಮಕನಾಗಿರುವ ನೀನೇ ವಸುದೇವಸುತ ಕೃಷ್ಣನೂ ಆಗಿರುವೆ. ಇಂದ್ರಿಯಾಗ್ನಿ ಯೊಳಗಿದ್ದು ವಿಷಯಗಳನ್ನು ಹೋಮಿಸುವ ಹೋತೃ, ಅಜ್ಞಾನವನ್ನು ದೂರ ಸರಿಸುವ ಮೂಲಕ ನಮ್ಮನ್ನು ಉದ್ಧರಿಸುವ ಕಾರಣ ವರುಣ, ಸರ್ವಜ್ಞನಾದ್ದರಿಂದ ಜಾತವೇದ, ಹೀಗೆ ನಿನ್ನನ್ನು ಸದಾ ಧ್ಯಾನಿಸುತ್ತಿರುವ ನಮ್ಮನ್ನು ರಕ್ಷಿಸು.

**ಅಭೀಹಿ ಮನ್ಯೋ ತವಸಸ್ತವೀಯಾನ್ ತಪಸಾ ಯುಜಾ ವಿ ಜಹಿ ಶತ್ರೂನ್ । ಅಮಿತ್ರಹಾ ವೃತ್ರಹಾ ದಸ್ಯುಹಾ ಚ ವಿಶ್ವಾ ವಸೂನ್ಯಾ ಭರಾತ್ವಂ ನಃ ॥ ೩ ॥**

ಹೇ ನರಸಿಂಹ, ಮಹತೋಮಹಿಮನಾಗಿರುವ ನೀನು ಎಲ್ಲ ಬಲಶಾಲಿಗಳನ್ನೂ ಮೀರಿಸಿದ ಅಪ್ರತಿಮ ಬಲಶಾಲಿ. ಅಂಥಹ ನೀನು ನಮ್ಮ ಶತ್ರುಗಳನ್ನು ಪರಾಭವಗೊಳಿಸು. ಹಿರಣ್ಯಕಶಿಪು ವೃತ್ರಾಸುರನಂಥವರನ್ನು ಸಂಹರಿಸಿದವ ನೀನು. ನಮ್ಮನ್ನು ದ್ವೇಷಿಸುವ ಶತ್ರುಗಳನ್ನು ನಾಶ ಪಡಿಸಿ ಎಲ್ಲ ರೀತಿಯ ಸಂಪತ್ತನ್ನು ತಂದುಕೊಡು.

**ತ್ವಂಹಿ ಮನ್ಯೋ ಅಭಿಭೂತ್ಯೋಜಾಃ ಸ್ವಯಂಭೂರ್ಭಾಮೋ ಅಭಿಮಾತಿಷಾಹಃ । ವಿಶ್ವಚರ್ಷಣಿಃ ಸಹುರಿಃ ಸಹಾವಾನಸ್ಮಾಸ್ವೋಜಃ ಪೃತನಾಸು ಧೇಹಿ ॥ ೪ ॥**

ಹೇ ನರಸಿಂಹನೇ, ನೀನು ಎಲ್ಲ ಶತ್ರುಗಳನ್ನು ಪರಾಭವ ಗೊಳಿಸುವಂತಹ ತೇಜಸ್ಸುಳ್ಳವನು. ತಾನೇ ತಾನಾಗಿ ಪ್ರಕಟ ಗೊಂಡವನು. ಹಗೆಗಳ ಸೊಕ್ಕು ಮುರಿದವನು. ಎಲ್ಲವನ್ನು ಸದಾ ಕಾಣುವವನು. ನಿನ್ನನ್ನು ನಂಬಿದ ಭಕ್ತರ ಎಲ್ಲ ತಪ್ಪುಗಳನ್ನು ಮನ್ನಿಸುವ ಸಹನೆಯ ಮೂರ್ತಿ. ಶತ್ರುಗಳನ್ನು ಗೆಲ್ಲುವ ಶಕ್ತಿಯನ್ನು ನೀಡು.

**ಅಭಾಗಃ ಸನ್ನಪ ಪರೇತೋ ಅಸ್ಮಿ ತವ ಕ್ರತ್ವಾ ತವಿಷಸ್ಯ ಪ್ರಚೇತಃ। ತಂತ್ವಾ ಮನ್ಯೋ ಅಕ್ರತುರ್ಜಿಹೀಳಾಹಂ ಸ್ವಾ ತನೂರ್ಬಲದೇಯಾಯಮೇಹಿ ॥ ೫ ॥**

ಎಲೈ ಸರ್ವಜ್ಞನಾದ ನರಸಿಂಹನೇ, ನಿನ್ನನ್ನು ಸರಿಯಾಗಿ ಅರಿಯದೆ ನಾನು ನನಗೆ ಬರಬೇಕಿದ್ದ ಸಂಪತ್ತು ಮತ್ತು ಸ್ಥಾನಗಳಿಂದ ವಂಚಿತನಾಗಿದ್ದೇನೆ. ನಿನ್ನ ಕೈಂಕರ್ಯವನ್ನು ಸರಿಯಾಗಿ ಮಾಡಲಿಲ್ಲ. ನಿನ್ನನ್ನು ಯೋಗ್ಯ ರೀತಿಯಲ್ಲಿ ಪೂಜಿಸಲಿಲ್ಲ. ಆದರಿಂದ ನೀನು ಕುಪಿತನಾಗಿರಬೇಕು. ನಿನ್ನ ಭಕ್ತನಾದ ನನಗೆ ಶಕ್ತಿನೀಡಿ ಉದ್ಧರಿಸು ಬಾ.

**ಅಯಂ ತೇ ಅಸ್ಮ್ಯುಪಮೇಹ್ಯರ್ವಾಙ್ ಪ್ರತೀಚೀನಃ ಸಹುರೇ ವಿಶ್ವಧಾಯಃ । ಮನ್ಯೋ ವಜ್ರಿನ್ನಭಿಮಾಮಾ ವವೃತ್ಸ್ವ ಹನಾವ ದಸ್ಯೂಂರುತ ಬೋಧ್ಯಾಪೇಃ ॥ ೬ ॥**

ಹೇ ವಜ್ರಧಾರಿ ನರಸಿಂಹನೇ, ನಾನು ನಿನ್ನವನು, ಇದು ನಿಶ್ಚಿತ. ನನ್ನತ್ತ ಬಾ. ಎಲ್ಲ ಕಡೆಗಳಿಂದಲೂ ನನ್ನನ್ನು ಸುತ್ತುವರಿದು ರಕ್ಷಿಸು. ನನ್ನ ಒಳಗೂ ಹೊರಗೂ ನಿಂತು ವೈರಿಗಳ ಬಗ್ಗೆ ನನ್ನನ್ನು ಎಚ್ಚರಿಸು ಮತ್ತು ನನ್ನೊಟ್ಟಿಗೇ ಇದ್ದು ವೈರಿಗಳನ್ನು ಸಂಹರಿಸುವ ಶಕ್ತಿಯನ್ನು ನನಗೆ ಕರುಣಿಸು. ದುಷ್ಟರನ್ನು ದಂಡಿಸುವುದರಲ್ಲಿ ಹಿಂಜರಿದ ನಮ್ಮವರಿಗೆ ಅರಿವು ನೀಡು.

**ಅಭಿಪ್ರೇಹಿ ದಕ್ಷಿಣತೋ ಭವಾಮೇಽಧಾ ವೃತ್ರಾಣಿ ಜಂಘನಾವ ಭೂರಿ । ಜುಹೋಮಿ ತೇ ಧರುಣಂ ಮಧ್ವೋ ಅಗ್ರಮುಭಾ ಉಪಾಂಶು ಪ್ರಥಮಾ ಪಿಬಾವ ॥೭॥**

ನನ್ನತ್ತ ಆಗಮಿಸು. ನನ್ನ ಬಲ ಬದಿಯಲ್ಲಿ ಬಂದು ನಿಲ್ಲು. ನಮ್ಮ ಸುತ್ತುವರೆದಿರುವ ವೈರಿಗಳನ್ನು ನುಚ್ಚುನೂರು ಮಾಡೋಣ. ಲೋಕಧಾರಕವಾದ ಸೋಮರಸವನ್ನು ಹೇರಳವಾಗಿ ಮೊದಲು ನಿನಗೆ ಅರ್ಪಿಸುತ್ತಿದ್ದೇನೆ. ಇಬ್ಬರೂ ಸೇರಿ ಅದರ ಸಾರಭಾಗವನ್ನು ಏಕಾಂತದಲ್ಲಿ ನಾವೇ ಮೊದಲು ಪಾನಮಾಡೋಣ.

**ತ್ವಯಾ ಮನ್ಯೋ ಸರಥಮಾರುಜಂತೋ ಹರ್ಷಮಾಣಾಸೋ ಧೃಷಿತಾ ಮರುತ್ವಃ । ತಿಗ್ಮೇಷವ ಆಯುಧಾ ಸಂಶಿಶಾನಾ ಅಭಿ ಪ್ರಯಂತು ನರೋ ಅಗ್ನಿರೂಪಾಃ ॥೮॥**

ಹೇ ನರಸಿಂಹ, ಪ್ರತಾಪಶಾಲಿಗಳಾದ ಯೋಧರು ನಿನ್ನೊಂದಿಗೇ

ರಥವನ್ನೇರಿ ಸಾಗುತ್ತ, ಬೆಂಕಿಯಂತೆ ವೈರಿಗಳನ್ನು ಸುಡುತ್ತ, ಹರಿತವಾದ ಬಾಣ ಮತ್ತಿತರ ಆಯುಧಗಳಿಂದ ಕೂಡಿ ವೇಗವಾಗಿ ಬಿರುಗಾಳಿಯಂತೆ ಶತ್ರುಗಳ ಮೇಲೆ ಎರಗಿಲಿ.

**ಅಗ್ನಿರಿವ ಮನ್ಯೋ ತ್ವಿಷಿತಃ ಸಹಸ್ವ ಸೇನಾನೀರ್ನಃ ಸಹುರೇ ಹೂತ ಏಧಿ । ಹತ್ವಾಯ ಶತ್ರೂನ್ ವಿ ಭಜಸ್ವ ವೇದ ಓಜೋ ಮಿಮಾನೋ ವಿಮೃಧೋ ನುದಸ್ವ ॥೯॥**

ಸಹನಾಮೂರ್ತಿಯಾದ ಹೇ ನರಸಿಂಹನೇ ನಿನಗೆ ಜಯವಾಗಲಿ. ನೀನೇ ನಮ್ಮ ಸೇನಾನಿ. ಬೆಂಕಿಯಂತೆ ಉರಿಯುಂಡೆಗಳನ್ನು ಉಗುಳುತ್ತ ಶತ್ರುಗಳನ್ನು ಸದೆಬಡಿ. ಉಳಿದವರನ್ನು ಘಾಸಿಗೊಳಿಸಿ ನಮ್ಮ ವಶಕ್ಕೆ ಕೊಡು. ಅವರನ್ನು ಗೆಲ್ಲುವ ಬಲವನ್ನೂ, ಸಂಪತ್ತನ್ನೂ ನಮಗೆ ಕರುಣಿಸು.

**ಸಹಸ್ವ ಮನ್ಯೋ ಅಭಿಮಾತಿಮಸ್ಮೇ ರುಜನ್ ಮೃಣನ್ ಪ್ರಮೃಣನ್ ಪ್ರೇಹಿ ಶತ್ರೂನ್ । ಉಗ್ರಂತೇ ಪಾಜೋ ನನ್ವಾ ರುರುಧ್ರೇ ವಶೀವಶಂ ನಯಸ ಏಕಜ ತ್ವಮ್ ॥೧೦॥**

ಹೇ ಸ್ವಾಮಿಯೇ, ಸ್ವತಂತ್ರನಾದ ನೀನು ಶತ್ರುಗಳನ್ನು ನಿಯಂತ್ರಿಸಬಲ್ಲೆ. ಅವರನ್ನು ನೀನೆ ನಿಗ್ರಹಿಸಬೇಕು. ಅವರನ್ನು ಬಾಧೆಗೊಳಪಡಿಸುತ್ತ ಹಿಂಸಿಸಿ ಬದುಕಿಬಾರದಂತೆ ಮಾಡು. ಅಪ್ರತಿಮವೀರನಾದ ನೀನು ಅವರನ್ನು ವಶಪಡಿಸಿಕೊಳ್ಳು.

**ಏಕೋ ಬಹೂನಾಮಸಿ ಮನ್ಯವೀಳಿತೋ ವಿಶಂವಿಶಂ ಯುಧಯೇ ಸಂಶಿಶಾಧಿ । ಅಕೃತ್ತರುಕ್ತ್ವಯಾಯುಜಾ ವಯಂ ದ್ಯುಮಂತಂ ಘೋಷಂ ವಿಜಯಾಯ ಕೃಣ್ಮಹೇ ॥ ೧೧ ॥**

ಅಪ್ರತಿಹತ ಪ್ರತಾಪವುಳ್ಳ ನರಸಿಂಹನೇ, ಬಹುಮಂದಿ ದೇವತೆಗಳ ನಡುವೆ ನೀನೊಬ್ಬನೇ ಎಲ್ಲರಿಂದಲೂ ಸ್ತೋತ್ರಕ್ಕೆ ಅರ್ಹನಾದವನು. ಎಲ್ಲ ಯೋಧರನ್ನೂ ಯುದ್ಧಕ್ಕೆ ಸನ್ನದ್ಧ ಗೊಳಿಸು ನೀನು ನಮ್ಮ ಜೊತೆಗಿರಲು ನಾವು ವಿಜಯದ ಸಿಂಹನಾದ ಮಾಡುವೆವು.

**ವಿಜೇಷಕೃದಿಂದ್ರ ಇವಾನವಬ್ರವೋಽಸ್ಮಾಕಂ ಮನ್ಯೋ ಅಧಿಪಾ ಭವೇಹ । ಪ್ರಿಯಂ ತೇ ನಾಮ ಸಹುರೇ ಗೃಣೀಮಸಿ ವಿದ್ಮಾ ತಮುತ್ಸಂ ಯತ ಆ ಬಭೂಥ ।।೧೨।।**

ಕೀಳುನುಡಿಗಳನ್ನಾಡದ ಹೇ ನರಸಿಂಹನೇ, ನೀನು ದೇವತೆಗಳಿಗೆ ದೇವೇಂದ್ರನಂತೆ ನಮಗೆ ಅಧಿಪತಿಯಾಗು. ನಿನ್ನ ಮಾತನ್ನು ನಾವೆಂದೂ ತಿರಸ್ಕರಿಸುವುದಿಲ್ಲ. ನಿನಗೆ ಪ್ರಿಯವಾದ ನಾಮಗಳನ್ನು ಉಚ್ಚರಿಸುತ್ತ ನಿನ್ನನ್ನು ಸಂತೋಷಗೊಳಿಸುವೆವು.

**ಆಭೂತ್ಯಾ ಸಹಜಾ ವಜ್ರ ಸಾಯಕ ಸಹೋ ಬಿಭರ್ಷ್ಯಭಿಭೂತ ಉತ್ತರಮ್। ಕ್ರತ್ವಾ ನೋ ಮನ್ಯೋ ಸಹ ಮೇದ್ಯೇಧಿ ಮಹಾಧನಸ್ಯ ಪುರುಹೂತ ಸಂಸೃಜಿ ।।೧೩।।**

ಶತ್ರುಗಳನ್ನು ನಾಶಪಡಿಸುವುದರಲ್ಲಿ ವಜ್ರಾಯುಧದಂತೆ ಇರುವವನೇ, ನೀನು ಬ್ರಹ್ಮಾದಿಗಳಿಂದ ನಿತ್ಯವೂ ಸ್ತುತ್ಯನು. ಮಹದೈಶ್ವರ್ಯದಿಂದ ಕೂಡಿರುವ ನೀನು ಅತ್ಯಂತ ಬಲಶಾಲಿ. ನಮ್ಮ ಸೇವೆಯನ್ನು ಸ್ವೀಕರಿಸಿ ನಮಗೂ ಐಶ್ವರ್ಯವನ್ನು ಕರುಣಿಸು.

**ಸಂಸೃಷ್ಟಂ ಧನಮುಭಯಂ ಸಮಾಕೃತಮಸ್ಮಭ್ಯಂ ದತ್ತಾಂ ವರುಣಶ್ಚ ಮನ್ಯುಃ । ಭಿಯಂ ದಧಾನಾ ಹೃದಯೇಷು ಶತ್ರವಃ ಪರಾಜಿತಾಸೋ ಅಪನಿಲಯಂತಾಮ್ ।।೧೪।।**

ಸ್ಥಿತಿಗೆ ಕಾರಣನಾದ ಅನಿರುದ್ಧನು ಮತ್ತು ಸಂಹಾರಕ್ಕೆ ಕಾರಣನಾದ ನರಸಿಂಹನು ಶತ್ರುಗಳಿಂದ ಒಟ್ಟುಗೂಡಿಸಿದ ವಿದ್ಯಾ ವಿತ್ತಾತ್ಮಕವಾದ ಎರಡು ರೀತಿಯ ಸಂಪತ್ತನ್ನು ನಮಗೆ ನೀಡಲಿ. ನಮ್ಮ ಶತ್ರುಗಳಲ್ಲಿ ಒಳಗೊಳಗೇ ಭಯ ಹುಟ್ಟಿಸಿ ಅವರು ಸೋತು ಕಂಗಾಲಾಗಿ ಪಲಾಯನ ಮಾಡುವಂತೆ ಮಾಡಲಿ.

## ಬಳಿತ್ಥಾ ಸೂಕ್ತ

**।। ಬಳಿತ್ಥೇತಿ ಪಂಚರ್ಚಸ್ಯ ಸೂಕ್ತಸ್ಯ ಔಚಥ್ಯೋ ದೀರ್ಘತಮಾ ಭೃಗುಃ ಋಷಯಃ ಪ್ರಾಣಾಗ್ನಿರ್ದೇವತಾಜಗತೀಛಂದಃ ಮುಖ್ಯಪ್ರಾಣಾಭಿಷೇಕೇ ವಿನಿಯೋಗಃ ।।**

**ಬಳಿತ್ಥಾ ತದ್ವಪುಷೇಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋಯತೋಽಜನಿ । ಯದೀಮುಪ ಹ್ವರತೇ ಸಾಧತೇ ಮತಿಃ ಋತಸ್ಯ ಧೇನಾ ಅನಯಂತ ಸಸ್ರುತಃ ॥೧॥**

ಭಗವಂತನ ಆಜ್ಞೆಯಂತೆ ಅವನ ಪ್ರೀತಿಗೋಸ್ಕರ ಅವತರಿಸುವ ವಾಯುದೇವರ ಮೂಲರೂಪವು ಬಲ ಹಾಗೂ ಜ್ಞಾನಾತ್ಮಕವಾಗಿದ್ದು ಶ್ವಾಸರೂಪದಿಂದ ಇಡೀ ವಿಶ್ವವನ್ನು ಹೊತ್ತಿದೆ. ಅದೇ ಬಲ ಮತ್ತು ಜ್ಞಾನಗಳಿಂದ ತುಂಬಿಕೊಂಡು ಪರಮಾತ್ಮನ ಇಚ್ಛೆಯಂತೆ ಅವತರಿಸಿದ ಮೊದಲನೆಯ ರೂಪವೇ ಮತಿನಾಮಕ ಹನುಮಂತ. ಅದು ಜ್ಞಾನರೂಪನಾದ ಶ್ರೀರಾಮಚಂದ್ರನ ಸಮೀಪದಲ್ಲಿ ಭಕ್ತಿಯಿಂದ ಸದಾ ಕ್ರೀಡಿಸುತ್ತಿದ್ದು ಆ ಭಗವಂತನ ಕಾರ್ಯಗಳನ್ನು ಸಾಧಿಸುವುದು. ಶ್ರೀರಾಮನ ಅಮೃತದಂಥಹ ಮಾತುಗಳನ್ನು ಸೀತಾಕೃತಿಯಲ್ಲಿದ್ದ ಮಹಾಲಕ್ಷ್ಮಿಗೆ ಒಪ್ಪಿಸಿತು.

**ಪೃಕ್ಷೋ ವಪುಃ ಪಿತುಮಾನ್ನಿತ್ಯ ಆ ಶಯೇ ದ್ವಿತೀಯಮಾ ಸಪ್ತ ಶಿವಾಸು ಮಾತೃಷು । ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ॥ ೨ ॥**

ವಾಯುದೇವರ ಎರಡನೆಯ ಅವತಾರವೇ ಭೀಮ ರೂಪ. ಶತ್ರುಸೇನೆಯ ಸದೆಬಡಿದ ರೂಪ. ಬಂಡಿಯನ್ನವ ಉಂಡ ರೂಪ. ಶುಭಕರವಾದ ಸಪ್ತಶಾಸ್ತ್ರಗಳಲ್ಲಿ ಸದಾ ವಿಹರಿಸುವ ರೂಪ. ಈ ವಾಯುದೇವರ ಮೂರನೆಯ ರೂಪವಾದ ಪೂರ್ಣಪ್ರಜ್ಞರನ್ನು ತತ್ತ್ವಜ್ಞಾನವನ್ನು ಕರೆಯಲೆಂದು ವೇದಾಭಿಮಾನಿನಿಯಾದ ಶ್ರೀ, ಭೂ ಮತ್ತು ದುರ್ಗಾದೇವಿಯರು ಹುಟ್ಟಿಸಿದರು.

**ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸಃ ಈಶಾನಾಸಃ ಶವಸಾ ಕ್ರಂತ ಸೂರಯಃ। ಯದೀಮನು ಪ್ರದಿವೋ ಮಧ್ವ ಆಧವೇ ಗುಹಾ ಸಂತಂ ಮಾತರಿಶ್ವಾ ಮಥಾಯತಿ ॥೩॥**

ಈ ಪೂರ್ಣಬೋಧರಿಂದ ರುದ್ರಾದಿ ದೇವತೆಗಳು ಪರತತ್ತ್ವದ ಗುಣರೂಪಾದಿಗಳನ್ನು ಸರಿಯಾಗಿ ಅರಿತು ಜ್ಞಾನಿಗಳೆನಿಸಿದರು. ಪೂರ್ಣಜ್ಞಾನದಿಂದ ಕೂಡಿದ ಮಧ್ವನಾಮಕರಾದ ವಾಯುದೇವರು

ನಿಗೂಢವಾಗಿದ್ದ ಭಗವಂತನ ಹಿರಿಮೆಯನ್ನು ಮತ್ತು ಅವನೇ ಸರ್ವಸ್ವಾಮಿ ಎಂಬ ತತ್ತ್ವವನ್ನು ವೇದಾದಿ ಶಾಸ್ತ್ರಗಳ ಮಥನಮಾಡಿ ಜಗತ್ತಿಗೆ ತಿಳಿಸಿಕೊಡುವರು.

**ಪ್ರ ಯತ್ ಪಿತುಃ ಪರಮಾನ್ನೀಯತೇ ಪರ್ಯಾ ಪೃಕ್ಷುಧೋ ವೀರುಧೋ ದಂಸು ರೋಹತಿ । ಉಭಾ ಯದಸ್ಯ ಜನುಷಂ ಯದಿನ್ವತ ಆದಿದ್ ಯವಿಷ್ಠೋ ಅಭವದ್ ಘೃಣಾ ಶುಚಿಃ ॥ ೪ ॥**

ವಾಯುದೇವರು ಮಧ್ವ ರೂಪದಿಂದ ಅವತರಿಸಿದಾಗ ತನ್ನ ತಂದೆಯಾದ ಪರಮಾತ್ಮನಿಂದ ಪ್ರೇರಿತರಾಗಿ ಪ್ರಶ್ನೆಗಳೆಂಬ ಬಳ್ಳಿಗಳನ್ನು ತನ್ನ ಹಲ್ಲುಗಳಲ್ಲಿ ಜಗಿದು ನಾಶಪಡಿಸುವರು. ತಾಯಿತಂದೆಯರೆನಿಸಿದ ಲಕ್ಷ್ಮೀನಾರಾಯಣರಿಂದ ಜ್ಞಾನಕಾರ್ಯಕ್ಕಾಗಿ ಜನಿಸಲ್ಪಟ್ಟ ಮಧ್ವ ಎಂಬ ಈ ರೂಪವು ನಿತ್ಯಶುದ್ಧವಾಗಿದ್ದು ಕರುಣೆಯಿಂದ ಸಜ್ಜನರನ್ನು ಉದ್ಧರಿಸುವುದು.

**ಆದಿನ್ಮಾತೃರಾವಿಶದ್ಯಾಸ್ವಾಶುಚಿರಹಿಂಸ್ಯಮಾನ ಉರ್ವಿಯಾ ವಿವಾವೃಧೇ ಅನು ಯತ್ ಪೂರ್ವಾ ಅರುಹತ್ ಸನಾಜುವೋ ನಿ ನವ್ಯಸೀಷ್ವವರಾಸು ಧಾವತೇ ॥ ೫ ॥**

ಶ್ರೀವಾಯುದೇವರು ಅಕಾರಶಬ್ದವಾಚ್ಯನಾದ ಶ್ರೀಹರಿಯ ಆಜ್ಞೆಯಿಂದ ಈ ರೀತಿ ಮೂರೂ ಅವತಾರಗಳಲ್ಲಿ ತಾಯಿಯ ಗರ್ಭವನ್ನು ಪ್ರವೇಶಿಸಿದರು. ಗರ್ಭವಾಸದ ಬೇಗೆಯನ್ನು ಅನುಭವಿಸದೇ ನಿರ್ಲೇಪರಾಗಿದ್ದರು. ನಿತ್ಯ ಪರಿಶುದ್ದರಾಗಿ ಬೆಳೆದ ಅವರು ಸನಾತನವಾದ ಪರಮಾತ್ಮ ನನ್ನು ಪ್ರತಿಪಾದಿಸುವ ಪರವಿದ್ಯೆ ಎನಿಸಿರುವ ನಿತ್ಯವಾದ ವೇದವಾಕ್ಯಗಳಿಗೆ ಶಿಕ್ಷಾ ವ್ಯಾಕರಣಾದಿ ವೇದಾಂಗಗಳಿಗೆ ಅನುಗುಣವಾಗಿ ವೃಕ್ಷಯೇರುವಂತೆ ನಿಧಾನವಾಗಿ ವಿವರಣೆ ನೀಡಿದರು. ವೇದಾಪೇಕ್ಷೆಯಿಂದ ಅವರವಾದ ಹಾಗೂ ಅರ್ವಾಚೀನವಾದ ಪೌರುಷೇಯ ಶಾಸ್ತ್ರಗಳಾದ ಪಂಚರಾತ್ರ,

ಮಹಾಭಾರತ, ಮೂಲರಾಮಾಯಣ ಮುಂತಾದವುಗಳಿಗೆ ಅನಾಯಾಸವಾಗಿ ವೇಗವಾಗಿ ವ್ಯಾಖ್ಯಾನ ಮಾಡಿದರು.

**(ಇತಿ ಬಳಿತ್ಥಾಸೂಕ್ತಮ್)**

## ಋಷಭ ಸೂಕ್ತ

ಋಷಭಂ ಮಾ ಸಮಾನಾನಎಮಿತಿ ಪಂಚರ್ಚಸ್ಯ ಸೂಕ್ತಸ್ಯ ಋಷಭೋ ವೈರಾಜೋ ಋಷಿಃ ನರಸಿಂಹೋ ದೇವತಾ ಆದ್ಯಾಶ್ಚತಸ್ರೋ ಅನುಷ್ಟುಭಃ ಅಂತ್ಯಾ ಮಹಾಪಂಕ್ತಿಃ ಮುಖ್ಯಪ್ರಾಣಾಭಿಷೇಕೇ ವಿನಿಯೋಗಃ

**ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸ ಹಿಮ್। ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಮ್ ॥೧ ॥**

ಸಮಾನರ ನಡುವೆ ನನ್ನನ್ನು ಶ್ರೇಷ್ಠನನ್ನಾಗಿ ಮಾಡು. ನಮ್ಮವರಾಗಿಯೂ ನಮಗೆ ಕೇಡೆಣಿಸುವ ಬಂಧುಗಳ ಸೊಕ್ಕನ್ನು ಅಡಗಿಸು. ಶತ್ರುಗಳನ್ನು ನಾಶಮಾಡು. ನನ್ನನ್ನು ವೇದವಾಣಿಯ ಪತಿಯನ್ನಾಗಿ ಮಾಡು.

**ಅಹಮಸ್ಮಿ ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ। ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ ॥೨॥**

ನಾನು ಪರಮ ಪುರುಷನಂತೆ ಯಾವುದೇ ಘಾಸಿಯಿಲ್ಲದೆ ನನಗೆ ಕೇಡೆಣಿಸುವ ಬಂಧುಗಳನ್ನು ಸದೆಬಡಿದವನಾಗಿದ್ದೇನೆ. ನನ್ನ ಶತ್ರುಗಳೆಲ್ಲ ನನ್ನ ಕಾಲಡಿಯಲ್ಲಿ ಬಿದ್ದು ನರಳುತ್ತಿದ್ದಾರೆ.

**ಅತ್ರೈವ ವೋऽಪಿ ನಹ್ಯಾಮ್ಯುಭೇ ಆರ್ತ್ನೀ ಇವ ಜ್ಯಯಾ । ವಾಚಸ್ಪತೇ ನಿ ಷೇಧೇಮಾನ್ಯಥಾ ಮದಧರಂ ವದಾನ್ ॥ ೩ ॥**

ಬಿಲ್ಲಿನ ಎರಡು ತುದಿಗಳನ್ನು ಹೆದೆಯಿಂದ ಕಟ್ಟಿ ಬಿಗಿಯುವಂತೆ ಇಲ್ಲಿ ನಿಮ್ಮನ್ನು ಕಟ್ಟಿ ಬಿಗಿಯುತ್ತೇನೆ. ವಾಗ್ದೇವಿಯ ಪತಿಯಾದ ಹೇ

ನರಸಿಂಹನೇ ನಿನ್ನನ್ನು ಕುರಿತು ಕೀಳಾಗಿ ವರ್ತಿಸುವ ಮತ್ತು ನನ್ನನ್ನು ಹಳಿಯುವ ಇವರನ್ನು ಅವರ ಯೋಗ್ಯತೆಗೆ ತಕ್ಕಂತೆ ನಿರಾಸೆಗೊಳಿಸು.

**ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ । ಆ ವಶ್ಚಿತ್ತಮಾ ವೋ ವ್ರತಮಾ ವೋಽಹಂ ಸಮಿತಿಂದದೇ ।।೪।।**

ನಾನು ನಿಮ್ಮನ್ನು ಸೋಲಿಸುವನಾಗಿ ಬಂದಿದ್ದೇನೆ. ವಿಶ್ವಕರ್ಮನೂ ತೋಜೋಸ್ವರೂಪನೂ ಸರ್ವಾಶ್ರಯನೂ ಆದ ಭಗವಂತನಲ್ಲಿ ನಿಮ್ಮ ಮನಸ್ಸು ನಿಲ್ಲದಂತೆ ಮಾಡುತ್ತೇನೆ. ನಿಮ್ಮ ವ್ರತವನ್ನು ಕೆಡಿಸುತ್ತೇನೆ. ನಿಮಗೆ ಗೆಲುವು ದೊರಕದಂತೆ ಮಾಡುತ್ತೇನೆ.

**ಯೋಗಕ್ಷೇಮಂ ವ ಆದಾಯಾಹಂ ಭೂಯಾಸಮುತ್ತಮ ಆ ವೋ ಮೂರ್ಧಾನಮಕ್ರಮೀಮ್ । ಅಧಸ್ಪದಾನ್ಮ ಉದ್ವದತ ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ।। ೫ ।।**

ನೀವು ಗಳಿಸಿದ ಎಲ್ಲವನ್ನು ಮತ್ತು ನೀವು ಕೂಡಿಟ್ಟ ಎಲ್ಲವನ್ನು ನಾನು ಕಸಿದುಕೊಂಡು ಬಹಳ ಎತ್ತರಕ್ಕೆ ಬೆಳೆಯುತ್ತೇನೆ. ನಿಮ್ಮ ತಲೆಯನ್ನು ಮೆಟ್ಟಿ ನಿಲ್ಲುತ್ತೇನೆ. ನನ್ನ ಕಾಲಡಿಯಲ್ಲಿ ಸಿಕ್ಕ ನೀವು ಮಳೆಯ ನೀರಿನಲ್ಲಿ ಕಪ್ಪೆಗಳು ಚೀರಾಡುವಂತೆ ಒದ್ದಾಡಿರಿ.

## ಗರುಡ ಮಂತ್ರ

(ಗರುಡ ದೇವರ ಅಭಿಷೇಕ ಕಾಲಕ್ಕೆ ಹೇಳಬೇಕಾದ ಮಂತ್ರ)

**ತತ್ಪುರುಷಾಯ ವಿದ್ಮಹೇ ಸುವರ್ಣಪಕ್ಷಾಯ ಧೀಮಹಿ । ತನ್ನೋ ಗರುಡಃ ಪ್ರಚೋದಯಾತ್ ।।**

ಸುವರ್ಣಮಯವಾದ ರೆಕ್ಕೆಗಳುಳ್ಳ ಶ್ರೀಹರಿಯ ಸೇವಕನಾದ ಗರುಡನನ್ನು ಧ್ಯಾನಿಸುತ್ತೇವೆ. ಅದರಿಂದ ಅವನು ನಮ್ಮನ್ನು ಸನ್ಮಾರ್ಗದಲ್ಲಿ ಪ್ರೇರಿಸಲಿ.

## ಶೇಷ ಮಂತ್ರ

(ಶೇಷದೇವರ ಅಭಿಷೇಕ ಕಾಲಕ್ಕೆ ಹೇಳಬೇಕಾದ ಮಂತ್ರ)

**ನಮೋ ಅಸ್ತು ಸರ್ಪೇಭ್ಯೋ ಯೇಕೇ ಚ ಪೃಥಿವೀಮನು । ಯೇ ಅಂತರಿಕ್ಷೇ ಯೇ ದಿವಿ ತೇಭ್ಯಃ ಸರ್ಪೇಭ್ಯೋ ನಮಃ ॥**

ಭೂಮಿ, ಅಂತರಿಕ್ಷ ಮತ್ತು ಸ್ವರ್ಗಲೋಕಗಳಲ್ಲಿರುವ ಎಲ್ಲ ಸರ್ಪಗಳಿಗೂ ನಮಸ್ಕಾರ.

## ಪಂಚಾಮೃತ ಸೂಕ್ತಗಳು

**ಕ್ಷೀರ - ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್ । ಭವಾ ವಾಜಸ್ಯ ಸಂಗಥೇ ॥**

ಚಂದ್ರಮಂಡಲದಲ್ಲಿರುವ ಹರಿಯೇ ಪ್ರಸನ್ನನಾಗು. ನಿನ್ನ ಕಾರುಣ್ಯ ಎಲ್ಲೆಡೆ ಹರಿಯಲಿ. ಕಾಮ ಕ್ರೋಧಾದಿ ಅರಿಷಡ್ವರ್ಗವನ್ನು ಗೆಲ್ಲಲು ನಮಗೆ ಶಕ್ತಿ ನೀಡು ಹಾಗೂ ಅನ್ನ ನೀಡು.

**ದಧಿ- ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ ಪ್ರಣ ಆಯೂಂಷಿ ತಾರಿಷತ್ ॥**

ದಧಿ ಮುಂತಾದ ಹವಿಸ್ಸನ್ನು ಭಕ್ಷಿಸುವ ಬಹಳ ವೇಗವಾಗಿ ಸಂಚರಿಸುವ ಸದಾ ಜಯಶಾಲಿಯಾದ ಅಗ್ನಿನಾರಾಯಣನನ್ನು ಸ್ತುತಿಸುತ್ತೇನೆ. ಅವನು ನಮ್ಮ ವಾಗಿಂದ್ರಯವನ್ನು ಪವಿತ್ರಗೊಳಿಸಲಿ. ಆಯಸ್ಸನ್ನು ವರ್ಧಿಸಲಿ.

**ಘೃತ - ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿ-ರ್ಘೃತೇಶ್ರಿತೋ ಘೃತಮ್ವಸ್ಯಧಾಮ ಅನುಷ್ವಧ ಮಾವಹ-ಮಾದಯಸ್ವ ಸ್ವಾಹಾ ಕೃತಂ ವೃಷಭ ವಕ್ಷಿ ಹವ್ಯಂ ॥**

ಘೃತದಿಂದಲೇ ಅಗ್ನಿಗೆ ಉತ್ಪತ್ತಿ ಮತ್ತು ಪ್ರಕಾಶ. ಅಗ್ನಿಗೆ

ಆಶ್ರಯವಾದ ಅಂಥಹ ಘೃತವನ್ನು ಅಗ್ನಿಗೆ ಅರ್ಪಿಸುತ್ತೇನೆ. ಹೇ ಅಗ್ನಿನಾರಾಯಣನೇ ಎಲ್ಲ ಹವಿಸ್ಸುಗಳನ್ನು ಆಯಾಯ ದೇವತೆಗಳಿಗೆ ತಲುಪಿಸಿ ಅವರನ್ನು ತೃಪ್ತಿಪಡಿಸು.

**ಮಧು - ಓಂ ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ । ಮಧು ನಕ್ತಮುತೋಷಸಿ ಮಧುಮತ್ಪಾರ್ಥಿವಂ ರಜಃ । ಮಧು ದ್ಯೌರಸ್ತು ನಃ ಪಿತಾ ।।ಮಧುಮಾನ್ನೋ ವನಸ್ಪತಿರ್ಮಧುಮಾಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ।।**

ಗಾಳಿ, ನದಿಗಳು, ಸಸ್ಯಗಳು, ರಾತ್ರಿ ಮತ್ತು ಹಗಲುಗಳು, ಭೂಮಿ ಮತ್ತು ಅಂತರಿಕ್ಷಗಳು, ವನಸ್ಪತಿಗಳು, ಸೂರ್ಯ ಮತ್ತು ಗೋವುಗಳು ನಮಗೆ ಸುಖವನ್ನು ಉಂಟುಮಾಡಲಿ.

**ಶರ್ಕರಾ - ಓಂ ಸ್ವಾಧುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ । ಸ್ವಾದು ರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಂ ಅದಾಭ್ಯಃ ।।**

ಹೇ ಸೋಮರಸವೇ, ನೀನು ಮಂಗಳನಾಮಗಳಿಂದ ಕರೆಯಲ್ಪಡುವ ಇಂದ್ರ, ಮಿತ್ರ, ವರಣ, ವಾಯು ಮತ್ತು ಬೃಹಸ್ಪತಿ ಮೊದಲಾದ ದಿವ್ಯರಾದ ದೇವತೆಗಳಿಗೆ ಆಸ್ವಾದನೆ ನೀಡುವೆತೆ ಹರಿಯುತ್ತಿರು. ಯಾರೂ ನಿನಗೆ ಹಿಂಸೆ ಮಾಡದಿರಲಿ.

**ಫಲ - ಓಂ ಯಾಃ ಫಲನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ । ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚಂತ್ವಂಹಸಃ ।।**

ಬೃಹಸ್ಪತಿನಾಮಕ ಪರಮಾತ್ಮನಿಂದ ಸೃಷ್ಟವಾದ ಎಲ್ಲ ವೃಕ್ಷಗಳೂ, ಅವುಗಳು ಫಲ ಹೂವುಗಳನ್ನು ನೀಡಲಿ ಅಥವಾ ನೀಡದಿರಲಿ, ಅವುಗಳಿಂದ ನಮ್ಮ ಪಾಪಗಳು ಪರಿಹಾರವಾಗವಂತೆ ಮಾಡು.

**।। ಶ್ರೀಕೃಷ್ಣಾರ್ಪಣಮಸ್ತು ।।**